# ಶಾಂಕರವೇದಾಂತ ನಿಘಂಟು

(ಅಧ್ಯಾತ್ಮ ಪ್ರಕಾಶ ಪತ್ರಿಕೆಯಲ್ಲಿ ಶ್ರೀ ಶ್ರೀಗಳವರು ಬರೆದು
ಪ್ರಕಟಿಸಿದ್ದ 41 ಲೇಖನಗಳ ಸಂಗ್ರಹ)



ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು



ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ - 573 211
ದೂರವಾಣಿ : 08175 273820

# ಶ್ರೀಶ್ರೀಗಳವರ ಕೃತಿಗಳು

## (ಅಧ್ಯಾತ್ಮಪ್ರಕಾಶ ಪತ್ರಿಕೆಯಿಂದ ಆಯ್ದ ಲೇಖನಗಳ ಸಂಗ್ರಹ)

ಶ್ರೀ ಶ್ರೀಗಳವರು ಅಧ್ಯಾತ್ಮಪ್ರಕಾಶ ಮಾಸಪತ್ರಿಕೆಯನ್ನು 1923 ಮಾರ್ಚ್‌ನಲ್ಲಿ ಪ್ರಾರಂಭಿಸಿ ತಾವು ಬ್ರಹ್ಮೀಭೂತರಾಗುವವರೆಗೂ (5.8.75) ತಾವೇ ಪ್ರಧಾನ ಸಂಪಾದಕರಾಗಿ ಮುನ್ನಡೆಸಿದರು. ಕಥೆ, ಸಂಭಾಷಣೆ, ಪರಿಶೀಲನೆ, ಜಿಜ್ಞಾಸೆ, ಪರಾಮರ್ಶೆ, ಸಂಶೋಧನೆ ಎಂಬಂತೆ ವಿವಿಧ ವಿಷಯಗಳನ್ನು ಕುರಿತು ಬರೆದ ಲೇಖನಗಳು ಬೇರೆ ಬೇರೆ ಹಂತದ ಜಿಜ್ಞಾಸುಗಳ ಮನೋಧರ್ಮಕ್ಕೆ ತಕ್ಕಂತೆ ಇರುತ್ತಿದ್ದವು. ಜನಸಾಮಾನ್ಯರಿಗೆ 1-2 ಪುಟಗಳಲ್ಲಿ ವೇದಾಂತದಲ್ಲಿ ಸಾಕಷ್ಟು ಪ್ರವೇಶ ಪಡೆದವರಿಗೆ ಹೆಚ್ಚು ವಿಸ್ತಾರವಾಗಿಯೂ ಬರೆಯುತ್ತಿದ್ದರು. ಈಗ ಹಳೆಯ ಸಂಪುಟಗಳು ದೊರೆಯುತ್ತಿಲ್ಲ. ಅನೇಕ ಭಕ್ತರ ಅಪೇಕ್ಷೆಯಂತೆ ಗ್ರಂಥರೂಪದಲ್ಲಿ ಹೊಸತಂದಿರುವ ಕೆಲವು ಪುಸ್ತಕಗಳ ಕಿರುಪರಿಚಯ ಇಲ್ಲಿದೆ.

### 1. ಋಗ್ವೇದಿಯ ಪುರುಷಸೂಕ್ತ (ಮಂತ್ರಾರ್ಥ ವಿವೇಚನೆ)

ಅ.ಪ್ರ . ಪತ್ರಿಕೆಯ 24ನೆ ಸಂಪುಟದ (ಸೆಪ್ಟೆಂಬರ್ 1954ರಿಂದ ಆಗಸ್ಟ್ 1955) 12 ಲೇಖನಗಳ ಸಂಕಲನ. ಪೂಜೆ ಮಾಡುವ ಪ್ರತಿಯೊಬ್ಬ ಆಸ್ತಿಕನಿಗೂ ತುಂಬ ಉಪಕಾರಿಯಾಗಿದೆ. ನಿಜವಾದ ಅರ್ಥವು ತಾತ್ತ್ವಿಕವಾಗಿ ಹೇಗೆ ವಿಸ್ತೃತವಾಗಿದೆ ಮತ್ತು ಕೇವಲ ಕರ್ಮಪರವಾಗಿರದೆ, ಭಕ್ತಿ , ಉಪಾಸನೆ, ಜ್ಞಾನಪರವಾಗಿದೆಯೆಂಬುದನ್ನು ಮಾರ್ಮಿಕವಾಗಿ ಹೃದಯಕ್ಕೆ ತಾಕುವ ಹಾಗೆ ಶ್ರೀ ಶ್ರೀಗಳವರು ಪ್ರತಿಪಾದಿಸಿದ್ದಾರೆ. ಎಲ್ಲ ವೇದದವರಿಗೂ ಮತ್ತು ಆಸ್ತಿಕ ಮಹಾಶಯರಿಗೂ ಉಪಯುಕ್ತವಾದ ಗ್ರಂಥ.

(ಎರಡನೆಯ ಮುದ್ರಣ, 2011, ಪು. 115, ಬೆಲೆ. 30 ರೂ.)

### 2. ವೇದಾಂತ ಸಂದೇಶಗಳು : ಸಂಪುಟ 1 (ಪರಮಾರ್ಥ ಚಿಂತನೆ)

1946 ಸೆಪ್ಟೆಂಬರ್‌ನಿಂದ 1949 ಆಗಸ್ಟ್‌ರವರೆಗೆ ''ಈ ತಿಂಗಳ ಸಂದೇಶ'' ಎಂಬ ಶೀರ್ಷಿಕೆಯಲ್ಲಿ ಶ್ರೀ ಶ್ರೀಗಳವರು ಬರೆದು ಅ. ಪ್ರ. ಮಾಸಪತ್ರಿಕೆಯಲ್ಲಿ ಪ್ರಕಟಿಸಿದ್ದ 36 ಲೇಖನಗಳ ಸಂಗ್ರಹ. ''ಭಗವಂತನಿಗೆ ಯಾವ ಹೆಸರು, ಪರಮಾತ್ಮನನ್ನು ಎಲ್ಲಿ ಕಾಣಬೇಕು, ಸ್ತೋತ್ರ , ಪ್ರಾರ್ಥನೆಗಳನ್ನು ಹೇಗೆ ಮಾಡಬೇಕು, ದುಃಖ ಕಷ್ಟ ಪರಿಹಾರಕ್ಕೆ ಭಗವಂತನನ್ನೇ ಶರಣು ಹೊಂದಬೇಕು'' ಎಂಬಿವೇ ಮುಂತಾದ ಮಹತ್ಪೂರ್ಣವಾದ ವಿಚಾರಗಳಿಂದ ತುಂಬಿ, ತತ್ತ್ವಜಿಜ್ಞಾಸುಗಳಿಗೆ ದಾರಿದೀಪದಂತಿದೆ. ಸಂಸ್ಕೃತ ಬಾರದವರಿಗೂ, ಸರಿಯಾದ ಗುರುಗಳು ದೊರಕದವರಿಗೂ ಈ ಗ್ರಂಥವು ಮಾರ್ಗದರ್ಶನವಾಗಿದೆ.

(ಎರಡನೆಯ ಮುದ್ರಣ, 2011, ಪು. 218, ಬೆಲೆ. 50 ರೂ.)

### 3. ವೇದಾಂತ ಸಂದೇಶಗಳು : ಸಂಪುಟ 2 (ಉಪನಿಷತ್ ಸಿರಿ)

ಬೇರೆ ಬೇರೆ ಉಪನಿಷತ್ತುಗಳ ವಾಕ್ಯಗಳನ್ನು ಸಂಚಿಕೆಗೊಂದರಂತೆ ಅ. ಪ್ರ. ಪತ್ರಿಕೆಯಲ್ಲಿ ಸಂಪುಟ 8, 9, 21, 26, 27ರಲ್ಲಿ ಪ್ರಕಟಿಸಿದ್ದ 52 ಲೇಖನಗಳ ಸಂಗ್ರಹ. ಮೊದಲು ದಶಶಾಂತಿ ಮಂತ್ರದ ಅರ್ಥ ಮತ್ತು ವಿವರಣೆ, ಅನಂತರ (1) ಇರಿವಿನ ಅರಿವು (2) ಆನಂದ ಸ್ವರೂಪವಾದ ಆತ್ಮನ ವಿಚಾರ (3) ಅಧ್ಯಾತ್ಮಸಾಧನಗಳು (4) ಜ್ಞಾನಸಾಧನೆಗಳು ಮತ್ತು (5) ಸಾಧನ ಕ್ರಮ ಎಂಬ ಐದು ಅಧ್ಯಾಯಗಳಲ್ಲಿ ಲೇಖನಗಳನ್ನು ಅಳವಡಿಸಿದೆ. ಧ್ಯಾನಯೋಗವನ್ನು ಹೇಗೆ ಮಾಡಬೇಕು ಮತ್ತು ಉಪಾಸನಾ ಕ್ರಮವನ್ನೂ ಶಾಸ್ತ್ರೀಯ ರೀತಿಯಲ್ಲಿ ತಿಳಿಸಿದೆ.

(ಎರಡನೆಯ ಮುದ್ರಣ, 2012, ಪು.247, ಬೆಲೆ. 60 ರೂ.)

### 4. ವೇದಾಂತ ಸಂದೇಶಗಳು : ಸಂಪುಟ 3 (ಅಧ್ಯಾತ್ಮ ಬೆಳಕು)

ಅ.ಪ್ರ . ಪತ್ರಿಕೆಯಲ್ಲಿ 1923ರಲ್ಲಿ ಪ್ರಾರಂಭವಾಗಿ 1974ರವರೆಗೂ ಕೆಲವೊಮ್ಮೆ ಪ್ರತಿ ತಿಂಗಳೂ ಮತ್ತು ಕೆಲವು ಒಂದೆರೆಡು ವರ್ಷಗಳ ಅಂತರದಲ್ಲೂ ಶ್ರೀ ಶ್ರೀಗಳವರು ಬರೆದು ಪ್ರಕಟಿಸಿದ್ದ ಸುಮಾರು 210 ಲೇಖನಗಳ ಸಂಗ್ರಹ. ಅರ್ಧ ಪುಟದಿಂದ ಹಿಡಿದು ಮೂರು ನಾಲ್ಕು ಪುಟಗಳ ಲೇಖನಗಳನ್ನೊಳಗೊಂಡಿವೆ. ಸ್ಥೂಲವಾಗಿ (1) ಅಧ್ಯಾತ್ಮ ವಿದ್ಯೆ (2) ಅಧ್ಯಾತ್ಮದ ಮೊದಲ ಸೋಪಾನ (3) ಅಧ್ಯಾತ್ಮಸಾಧನಗಳು (4) ಅಧ್ಯಾತ್ಮಪ್ರಕಾಶ (5) ಅಧ್ಯಾತ್ಮ ಚಿಂತನೆ (6) ಅಧ್ಯಾತ್ಮಜ್ಞಾನ ಎಂಬ ಆರು ಅಧ್ಯಾಯಗಳಾಗಿ ವರ್ಗೀಕರಿಸಿ ಎಲ್ಲಾ ಲೇಖನಗಳನ್ನೂ ಅಳವಡಿಸಿದೆ.

(ರಕ್ಷಾಕವಚದ ಮರು ಹಾಳೆಯಲ್ಲಿ ಮುಂದುವರೆದಿದೆ).

ಅಧ್ಯಾತ್ಮ ಗ್ರಂಥಾವಳಿ

# ಶಾಂಕರವೇದಾಂತ ನಿಘಂಟು

(ಅಧ್ಯಾತ್ಮ ಪ್ರಕಾಶ ಪತ್ರಿಕೆಯಲ್ಲಿ ಶ್ರೀ ಶ್ರೀಗಳವರು ಬರೆದು
ಪ್ರಕಟಿಸಿದ್ದ 41 ಲೇಖನಗಳ ಸಂಗ್ರಹ)

ಸಂಗ್ರಹಕಾರರು
ಅಧ್ಯಾತ್ಮ ಪ್ರಕಾಶ ಕಾರ್ಯಾಲಯ

ಕ್ರಮಾಂಕ : 258


ಅಧ್ಯಾತ್ಮ ಪ್ರಕಾಶ ಕಾರ್ಯಾಲಯ

ಹೊಳೆನರಸೀಪುರ – 573 211
ದೂರವಾಣಿ: 08175-273820
www.adhyatmaprakasha.org.
email: secretary@adhyatmaprakasha.org

ಬೆಂಗಳೂರು ಶಾಖೆ :
ನಂ. 68, (ಹೊಸ ನಂ. 6), ಎ.ಪಿ.ಕೆ. ರಸ್ತೆ, 2ನೇ ಬ್ಲಾಕ್,
ತ್ಯಾಗರಾಜನಗರ, ಬೆಂಗಳೂರು – 28   ದೂ : 2676 5548
email: shankara.bhaskara@gmail.com

**SHANKARAVEDANTHA NIGHANTU:** Articles Written by **Sri Sri Sachidanandendra Saraswathi Swamiji, of** Holenarasipur, Published by Adhyatma Prakasha Karyalaya, Holenarasipur - 573 211, India

**Phone : 08175-273820**
website www.adhyatmaprakasha.org.
email: adhyatmaprakasha@gmail.com



ಮೊದಲನೆಯ ಮುದ್ರಣ : **2014**

ಪ್ರತಿಗಳು : : **1000**

ಮುದ್ರಣ ಕಾಗದ : **70 GSM NS Maplitho**

ಪುಟಗಳು : **10+48=58**

**ಬೆಲೆ : ರೂ. 20/-**

ಪ್ರತಿಗಳು ದೊರೆಯುವ ಸ್ಥಳ :
ಅಧ್ಯಾತ್ಮಪ್ರಕಾಶಕಾರ್ಯಾಲಯ
ತ್ಯಾಗರಾಜನಗರ, ಬೆಂಗಳೂರು - 560 028
ದೂ : 080-26765548
email: shankara.bhaskara@gmail.com

ಅಕ್ಷರ ಜೋಡಣೆ ಮತ್ತು ಮುದ್ರಣ ಸ್ಥಾನ:
ಶ್ರೀರಾಮ ಪ್ರಿಂಟರ್ಸ್
ನಂ.25, 15ನೇ ಕ್ರಾಸ್,
ಶ್ರೀನಿಧಿ ಲೇಔಟ್, ಬೆಂಗಳೂರು - 560 062
ದೂ.: 98453 46197

ಸದ್ಗುರುಭ್ಯೋ ನಮಃ

# ಪ್ರಕಾಶಕರ ಬಿನ್ನಹ

ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳವರು 'ಅಧ್ಯಾತ್ಮ ಪ್ರಕಾಶ' ಮಾಸಪತ್ರಿಕೆಯನ್ನು 1923ನೆಯ ಮಾರ್ಚ್ ತಿಂಗಳಿನಲ್ಲಿ ಪ್ರಾರಂಭಿಸಿ, ತಾವು ಬ್ರಹ್ಮೀಭೂತರಾಗುವವರೆಗೂ ಅಂದರೆ 5-8-1975ರ ವರೆಗೂ ತಾವೇ ಪ್ರಧಾನ ಸಂಪಾದಕರಾಗಿದ್ದರು. ಕಥೆ, ಸಂಭಾಷಣೆ, ಪರಿಶೀಲನೆ, ಜಿಜ್ಞಾಸೆ, ಪರಾಮರ್ಶೆ, ಸಂಶೋಧನೆ, ವಿವರಣೆ, ನಿರೂಪಣೆ ಎಂಬಂತೆ ಸ್ವಾಮಿಗಳವರು ವಿವಿಧ ವಿಷಯಗಳನ್ನು ಕುರಿತು ಬರೆದ ಲೇಖನಗಳು ಬೇರೆ ಬೇರೆ ಹಂತದ ಜಿಜ್ಞಾಸುಗಳ ಮನೋಧರ್ಮಕ್ಕೆ ತಕ್ಕಂತೆ ಇರುತ್ತಿದ್ದುವು. ಜನಸಾಮಾನ್ಯರಿಗೆ 1-2 ಪುಟಗಳಲ್ಲಿಯೂ, ವೇದಾಂತದಲ್ಲಿ ಸಾಕಷ್ಟು ಪ್ರವೇಶಪಡೆದವರಿಗೆ ಹೆಚ್ಚು ವಿಸ್ತಾರವಾಗಿಯೂ ಅವರು ಬರೆಯುತ್ತಿದ್ದರು.

ಈಗಿನ ಜನಾಂಗ ಮತ್ತು ಸನ್ನಿವೇಶಕ್ಕೂ ಪ್ರಸ್ತುತವಾಗಿವೆ. ಈಗ ಲಭ್ಯವಿಲ್ಲ. ಅನೇಕ ಭಕ್ತಾದಿಗಳ ಅಪೇಕ್ಷೆಯಂತೆ ಕಾರ್ಯಾಲಯದ ಕಮಿಟಿಯವರು ಐದಾರು ವರ್ಷಗಳ ಹಿಂದೆಯೇ ಉಪಯುಕ್ತವಾದ ಲೇಖನಗಳನ್ನೆಲ್ಲಾ ಹುಡುಕಿ ತೆಗೆದು ಒಟ್ಟು ಐದಾರು ಸಾವಿರ ಪುಟಗಳಷ್ಟು ವಿಶಾಲವಾಗಿದೆಯೆಂಬುದು ಕಮಿಟಿಯವರ ಗಮನಕ್ಕೆ ಬಂದಿತು. ಆ ಗುಂಪಿನಲ್ಲಿ ಉಪಯುಕ್ತವಾದ ಲೇಖನಗಳನ್ನು ವಿಂಗಡಿಸಿ ವಿಷಯಾನುಕ್ರಮವಾಗಿ ಒಟ್ಟುಗೂಡಿಸಿ 300-400 ಪುಟಗಳಂತೆ 8-10 ಸಂಪುಟಗಳಲ್ಲಿ ಹೊರತರಲು ತೀರ್ಮಾನಿಸಿದರು.

ಈ ಕೃತಿಶ್ರೇಣಿಯಲ್ಲಿ ವಿದ್ವಾಂಸರುಗಳ ಸಹಾಯದಿಂದ ಇಲ್ಲಿಯವರೆಗೆ **'ವೇದಾಂತ ಸಂದೇಶಗಳು'** ಎಂಬ ಶೀರ್ಷಿಕೆಯಲ್ಲಿ ಕೆಳಕಂಡ ಐದು ಸಂಪುಟಗಳು ಹೊರಬಂದಿವೆ.

1. ಸಂಪುಟ -1: ಪರಮಾರ್ಥ ಚಿಂತನೆ : ಪು. 218
2. ಸಂಪುಟ -2: ಉಪನಿಷತ್ತುಗಳ ಸಿರಿ: ಪು. 247
3. ಸಂಪುಟ -3: ಅಧ್ಯಾತ್ಮಬೆಳಕು:ಪು. 356
4. ಸಂಪುಟ -4: ಅಧ್ಯಾತ್ಮದ ಔನ್ನತ್ಯದೆಡೆಗೆ:334
5. ಸಂಪುಟ -5: ಶಂಕರನ ಪತ್ರಗಳು-ಹಿತವಚನಗಳು:ಪು.583

ಈ ಐದೂ ಸಂಪುಟಗಳು ಜನಪ್ರಿಯವಾಗಿದ್ದು, ಕಾರ್ಯಾಲಯದಲ್ಲಿ ಸುಲಭದರದಲ್ಲಿ ದೊರಕುತ್ತವೆ.

ಇದೇ ಕೃತಿಶ್ರೇಣಿಯಲ್ಲಿ ಶ್ರೀ ಶ್ರೀಗಳವರು 1947 ಅಕ್ಟೋಬರ್ (ಸಂಪುಟ 17) ರಿಂದ (ಸಂ.20)ರವರೆಗೆ, **''ಶಂಕರವೇದಾಂತ ನಿಘಂಟು''** ಎಂಬ ಹೆಸರಿನಲ್ಲಿ 41 ಲೇಖನಗಳನ್ನು (ಸುಮಾರು 400 ಶಬ್ದಗಳು) ಅಕ್ಷರಾದಿಶಬ್ದಾನುಕ್ರಮಣಿಕೆಯಲ್ಲಿ 1-2 ಪುಟಗಳಂತೆ ಬರೆದು ಪ್ರಕಟಿಸಿದ್ದರು. ಲೇಖನಗಳು ಈಗ ಲಭ್ಯವಿಲ್ಲ. ಅನೇಕ ಭಕ್ತಾದಿಗಳ ಅಪೇಕ್ಷೆಯಂತೆ ಈ ಲೇಖನಗಳನ್ನೆಲ್ಲಾ ಒಟ್ಟುಗೂಡಿಸಿ ಗ್ರಂಥ ರೂಪದಲ್ಲಿ ಮೊದಲನೆಯ ಬಾರಿಗೆ ಹೊರತರಲಾಗಿದೆ.

ಲೇಖನಗಳ ಪ್ರಾರಂಭದಲ್ಲೇ ಶ್ರೀಶ್ರೀಗಳವರು ಬರೆದಿರುವ ಒಕ್ಕಣೆ ಹೀಗಿದೆ. **''ಶಂಕರಾಚಾರ್ಯರ ಭಾಷ್ಯಗಳಲ್ಲಿ ಉಪಯೋಗಿಸಿರುವ ಕೆಲವು ಶಬ್ದಗಳನ್ನೂ ನುಡಿಗಟ್ಟುಗಳನ್ನೂ ವಿವರಿಸುವದಕ್ಕೆ ಕೆಲವು ಲೇಖನಗಳನ್ನು ವಿನಿಯೋಗಿಸಬೇಕೆದು ಸಂಕಲ್ಪಿಸಿರುತ್ತೇನೆ. ಶಂಕರಾಚಾರ್ಯರ ವೇದಾಂತ ಪ್ರಕ್ರಿಯೆಯ ಅಸಾಧಾರಣ ರೂಪವನ್ನು ತಿಳಿದುಕೊಳ್ಳಬೇಕೆನ್ನುವವರಿಗೆ ಇವುಗಳಿಂದ ಸಹಾಯವಾಗುವದೆಂದು ನಂಬಿರುತ್ತೇನೆ''**

ಈ ಗ್ರಂಥದಲ್ಲಿ ಪ್ರತಿಯೊಂದು ಶಬ್ದದ ಅರ್ಥ, ವಿವರಣೆ ಪ್ರಸ್ಥಾನತ್ರಯ ಭಾಷ್ಯಗಳಲ್ಲಿ ಬಂದಿರುವ ಮಂತ್ರ- ಶ್ಲೋಕ- ಭಾಷ್ಯ ಭಾಗಗಳನ್ನು ಸೂಚಿಸಿರುವದು ಒಂದು ವೈಶಿಷ್ಟ್ಯ. ಪ್ರಸ್ಥಾನತ್ರಯಗಳ ಭಾಷ್ಯಗಳನ್ನು ಅಧ್ಯಯನಮಾಡುವ ಜಿಜ್ಞಾಸುಗಳಿಗೆ ಬಹಳ ಉಪಯೋಗವಾಗುತ್ತದೆ.

ಶ್ರೀಶ್ರೀಗಳು 1945ರಿಂದ 1952ರ ವರೆಗೆ **''ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ''** ಸರಣಿಯಲ್ಲಿ ಪರಿಷ್ಕರಿಸಿ ಬರೆದಿರುವ ಪ್ರಸ್ಥಾನತ್ರಯ ಭಾಷ್ಯಗಳು, ಉಪದೇಶ ಸಾಹಸ್ರಿ, ನೈಷ್ಕರ್ಮ್ಯ ಸಿದ್ಧಿ-ಗ್ರಂಥಗಳಲ್ಲಿ ಅನೇಕ ಸಂದರ್ಭಗಳಲ್ಲಿ ಬಂದಿರುವ ಉಪಯುಕ್ತವಾದ ಶಬ್ದಗಳನ್ನೆಲ್ಲಾ ಗ್ರಂಥದ ಕೊನೆಯಲ್ಲಿ ಅಕ್ಷರಾದಿ ಶಬ್ದಾನುಕ್ರಮಣಿಕೆ ಎಂಬ ಪರಿಶಿಷ್ಟಗಳನ್ನು ಸೇರಿಸಿದ್ದರು. ಇವುಗಳನ್ನೆಲ್ಲಾ ಪರಿಶೀಲಿಸಿ ಒಟ್ಟುಗೂಡಿಸಿ ''ಪಾರಿಭಾಷಿಕ ಶಬ್ದಕೋಶ'' ಎಂಬ ನಿಘಂಟು ಪುಸ್ತಕವನ್ನು 2003ರಲ್ಲಿ ಕಾರ್ಯಾಲಯದ ಮೂಲಕ ಪ್ರಕಟಿಸಲಾಗಿದೆ. ಶಾಂಕರಭಾಷ್ಯಾಧ್ಯಯನವನ್ನು ಮಾಡುವ ಜಿಜ್ಞಾಸುಗಳಿಗೆ ಹೆಚ್ಚು ಉಪಕಾರಿಯಾಗಿದೆ. ಈ ಪುಸ್ತಕವೂ ಕಾರ್ಯಾಲಯದಲ್ಲಿ ದೊರಕುತ್ತದೆ.

ಬಹುಭಾಷಾ ವಿದ್ವಾಂಸರೂ, ಕನ್ನಡ, ಇಂಗ್ಲೀಷ್ ಮತ್ತು ಸಂಸ್ಕೃತ ಭಾಷೆಗಳ ಗ್ರಂಥಕರ್ತರೂ, ಅನೇಕ ಸಂಸ್ಥೆಗಳಿಂದ ಪ್ರಶಸ್ತಿಗಳನ್ನು ಪಡೆದವರೂ, ಉಪನ್ಯಾಸಕರೂ

ಆದ ಡಾ।। ಎಸ್. ರಂಗನಾಥರವರು ಶ್ರೀ ಶ್ರೀಗಳವರ ಮತ್ತು ಗ್ರಂಥದ ಬಗ್ಗೆ ಬರೆದಿರುವ ಉಪಯುಕ್ತವಾದ ಲೇಖನವು ಗ್ರಂಥದ ಘನತೆಯನ್ನು ಹೆಚ್ಚಿಸಿದೆ. ಕಾರ್ಯಾಲಯದ ಪರವಾಗಿ ಕೃತಜ್ಞತಾಪೂರ್ವಕವಾದ ವಂದನೆಗಳು.

ಈಗ ಪ್ರಕಾಶನಗೊಳ್ಳುತ್ತಿರುವ ಈ ಗ್ರಂಥ ಮತ್ತು **'ಹೊಸ ಜಿಜ್ಞಾಸುಗಳ ಪ್ರಶ್ನೆಗಳಿಗೆ ಉತ್ತರಗಳು ಮತ್ತು ಮನಸ್ಸಿಗೆ ಉಪದೇಶ'** ಎಂಬ ಎರಡೂ ಗ್ರಂಥಗಳ ಮುದ್ರಣಕ್ಕೆ ಉದಾರವಾಗಿ ಸಹಾಯ ಮಾಡಿರುವ ದಾನಿಗಳ ಹೆಸರುಗಳನ್ನು ಮುಂದೆ ಕೊಡಲಾಗಿದೆ.

ಧನಸಹಾಯ ಮಾಡಿರುವ ಎಲ್ಲಾ ಭಕ್ತಾದಿಗಳಿಗೂ, ಅಕ್ಷರ ಜೋಡಣೆ ಮತ್ತು ಸುಂದರವಾಗಿ ಮುದ್ರಣ ಮಾಡಿಕೊಟ್ಟಿರುವ ಶ್ರೀರಾಮಪ್ರಿಂಟರ್ಸ್ ಮತ್ತು ಕರಡು ಪ್ರತಿಗಳನ್ನು ತಿದ್ದಿ ಸರಿಪಡಿಸಿಕೊಟ್ಟಿರುವ ಪಂಡಿತರಾದ ವೇ।। ಬ್ರ।। ಶ್ರೀ ಲಕ್ಷ್ಮೀಶ ಭಟ್ಟರಿಗೂ ಕಾರ್ಯಾಲಯವು ಕೃತಜ್ಞತಾಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಎಂದಿನಂತೆ ಮಹಾಜನರು ಆದರದಿಂದ ಬರಮಾಡಿಕೊಂಡು, ಅಧ್ಯಯನ ಮಾಡಿ ಹೆಚ್ಚಿನ ಪ್ರಯೋಜನವನ್ನು ಪಡೆದುಕೊಳ್ಳಲಿ, ಗ್ರಂಥ ಪ್ರಕಟನಾ ಕಾರ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಲಿ ಎಂಬುದಾಗಿ ಭಗವಂತನನ್ನು ಪ್ರಾರ್ಥಿಸುತ್ತೇವೆ.

ಜಯನಾಮ ಸಂವತ್ಸರದ
ಆಷಾಢ ಬಹುಳ ತ್ರಯೋದಶಿ
ಗುರುವಾರ : ತಾ।। **24-07-2014**

**ಪ್ರಕಾಶಕರು**

# 6

## ಮುಡಿನಮನ

''**ವೇದಾಂತ**'' ಎಂದರೆ ವೇದದ ಅಂತ ಅಥವಾ ವೇದದ ಪರಮಾರ್ಥ ಬೋಧನೆ - ಉಪನಿಷತ್ತು ಎಂಬುದು ಸಾಮಾನ್ಯವಾದ ಅರ್ಥ. ಶಾಂಕರವೇದಾಂತಕ್ಕೆ ಪ್ರಸ್ಥಾನತ್ರಯಗಳಾದ ಉಪನಿಷತ್ತು (ಶ್ರುತಿಪ್ರಸ್ಥಾನ), ಭಗವದ್ಗೀತೆ (ಸ್ಮೃತಿ ಪ್ರಸ್ಥಾನ), ಬ್ರಹ್ಮಸೂತ್ರ (ಸೂತ್ರ ಅಥವಾ ನ್ಯಾಯಪ್ರಸ್ಥಾನ) ಗಳು ಆಧಾರಸ್ತಂಭಗಳು. ಭಗವತ್ಪಾದ ಶಂಕರರು ಪರಮೇಶ್ವರನ ಅವತಾರವಾಗಿ ಧರೆಗಿಳಿದು ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಪ್ರಸನ್ನ ಗಂಭೀರ ಶೈಲಿಯಲ್ಲಿ ಪ್ರಸ್ಥಾನತ್ರಯಗಳಿಗೆ ಭಾಷ್ಯವನ್ನು ಅನುಗ್ರಹಿಸಿರುವದಾಗಿ ಜನಜನಿತವಾಗಿದೆ.

**ಅಷ್ಟವರ್ಷೇ ಚತುರ್ವೇದೀ ದ್ವಾದಶೇ ಸರ್ವಶಾಸ್ತ್ರವಿತ್ ।**
**ಷೋಡಶೇ ಕೃತವಾನ್ ಭಾಷ್ಯಂ ದ್ವಾತ್ರಿಂಶೇ ಮುನಿರಭ್ಯಗಾತ್ ॥**

ಈ ಭಾಷ್ಯಗಳಲ್ಲಿನ ಬೋಧನೆ ಜನಸಾಮಾನ್ಯರಿಗೆ ಅರ್ಥವಾಗಬೇಕಾದರೆ ವೇದಾಂತದಲ್ಲಿ ಸಾಮಾನ್ಯವಾಗಿ ಬಳಸುವ ಪಾರಿಭಾಷಿಕ ಪದಗಳ ಅರಿವಿರಬೇಕಾಗುತ್ತದೆ. ಅಂತಹ ಪಾರಿಭಾಷಿಕ ಪದಗಳ ಪರಿಚಯವಾಗಲೆಂದೇ ಪರಮಪೂಜ್ಯ ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳು ಹಿಂದೆ ''**ಪಾರಿಭಾಷಿಕ ಪದಕೋಶ**'' ಎಂಬ ಗ್ರಂಥವನ್ನು ಸಾರಸ್ವತ ಲೋಕಕ್ಕೆ ನೀಡಿದ್ದರು. ಅವರು ಬಹಳ ಹಿಂದೆಯೇ ಅಂದರೆ 1947 ಸಂಪುಟ 50 ರಿಂದ 60 ರವರೆಗೆ ''**ಶಾಂಕರವೇದಾಂತ ನಿಘಂಟು**'' ಎಂಬ ಹೆಸರಿನಲ್ಲಿ 41 ಲೇಖನಗಳನ್ನು 400 ಶಬ್ದಗಳ ಹಿನ್ನೆಲೆಯಲ್ಲಿ ಅಕಾರಾದಿ ಶಬ್ದಾನುಕ್ರಮಣಿಕೆಯಲ್ಲಿ 1-2 ಪುಟಗಳಂತೆ ಬರೆದು ಪ್ರಕಟಿಸಿದ್ದರು. ಆದರೆ ಈಗ ಆ ಲೇಖನಗಳು ಉಪಲಬ್ಧವಿಲ್ಲ. ಅನೇಕ ಭಕ್ತಾದಿಗಳ ಅಪೇಕ್ಷೆಯಂತೆ ಈ ಲೇಖನಗಳನ್ನೆಲ್ಲಾ ಒಟ್ಟುಗೂಡಿಸಿ ಗ್ರಂಥರೂಪದಲ್ಲಿ ಕ್ರಮಾಂಕ 258ರಂತೆ ಈಗ ಬೆಳಕಿಗೆ ಬರುತ್ತಿರುವುದು ನಿಜಕ್ಕೂ ಸ್ತುತ್ಯಾರ್ಹ.

ನಿಘಂಟು ತಯಾರಕರಿಗೆ ಅಗಾಧವಾದ ಪಾಂಡಿತ್ಯ, ಅಪಾರವಾದ ವ್ಯಾಸಂಗ, ಅನನ್ಯಾದೃಶವಾದ ಶ್ರದ್ಧೆ ಹಾಗೂ ತಾಳ್ಮೆ, ಸಾಮಾಜಿಕ ಕಳಕಳಿ, ಅಪ್ರತಿಮವಾದ ಭಾಷಾಪ್ರಭುತ್ವಗಳು ಇರಬೇಕಾಗುತ್ತದೆ. ಇವೆಲ್ಲವನ್ನೂ ದೈವಿಕವಾಗಿ ಮೈಗೂಡಿಸಿಕೊಂಡವರೇ 'ಕರ್ನಾಟಕ ಶಂಕರ', 'ಅಭಿನವ ಶಂಕರ'

ಎಂದು ಖ್ಯಾತರಾದ ಪರಮಪೂಜ್ಯ ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳು.

ಈ ಅತ್ಯುಪಯುಕ್ತವೂ ಅತಿ ಮಹತ್ವವೂ ಆದ ಕೃತಿಯಲ್ಲಿ ಶ್ರೀಗಳವರು ಪ್ರತಿಯೊಂದು ಪಾರಿಭಾಷಿಕ ಪದವನ್ನು ಆಯ್ದು ತೆಗೆದು ಆ ಶಬ್ದಕ್ಕೆ ಸಾಂಖ್ಯ, ವೈಶೇಷಿಕ, ನಯ್ಯಾಯಿಕ, ಮೀಮಾಂಸಕಾದಿ ಮತಗಳವರು ಕೊಟ್ಟಿರುವ ಅರ್ಥ ಹೇಳಿ ತಪ್ಪಾಗಿದೆಯೆಂದೂ ಶಂಕರಾಚಾರ್ಯರು ತಮ್ಮ ಪ್ರಸ್ಥಾನತ್ರಯಗಳಲ್ಲಿ ಅನುಗ್ರಹಿಸಿರುವ ಭಾಷ್ಯ ಹೇಗೆ ಸಮರ್ಪಕವಾಗಿದೆಯೆಂದೂ, ಭಾಷ್ಯವಾಕ್ಯ ಗಳನ್ನೇ, ಉದ್ಧರಿಸಿ ಸಾಬೀತುಪಡಿಸಿದ್ದಾರೆ. ಶ್ರೀಗಳವರೇ ಈ ಲೇಖನಗಳ ಪ್ರಾರಂಭದಲ್ಲಿ ತಿಳಿಸಿರುವಂತೆ -

''ಶಂಕರಾಚಾರ್ಯರ ಭಾಷ್ಯಗಳಲ್ಲಿ ಉಪಯೋಗಿಸಿರುವ ಕೆಲವು ಶಬ್ದಗಳನ್ನು ನುಡಿಗುಚ್ಛಗಳನ್ನು ವಿವರಿಸುವದಕ್ಕೆ ಕೆಲವು ಲೇಖನಗಳನ್ನು ವಿನಿಯೋಗಿಸ ಬೇಕೆಂದು ಸಂಕಲ್ಪಿಸಿರುತ್ತೇನೆ. ಶಂಕರಾಚಾರ್ಯರ ವೇದಾಂತ ಪ್ರಕ್ರಿಯೆಯ ಅಸಾಧಾರಣ ರೂಪವನ್ನು ತಿಳಿದುಕೊಳ್ಳಬೇಕೆನ್ನುವವರಿಗೆ ಇವುಗಳಿಂದ ಸಹಾಯವಾಗುವುದೆಂದು ನಂಬಿರುತ್ತೇನೆ''. ಸ್ಥಾಲೀಪುಲಾಕನ್ಯಾಯ ದಂತೆ ನಾವು **''ಅನಿರ್ವಚನೀಯ''** ಎಂಬ ಪದವನ್ನೇ ನೋಡಬಹುದು. ಪರಮಾತ್ಮನಲ್ಲಿ ಕಲ್ಪಿತವಾಗಿರುವ ನಾಮರೂಪಗಳು ಆತನ ಸ್ವರೂಪವೆಂದಾಗಲೀ ಆತನಿಗಿಂತ ಬೇರೆಯೆಂದಾಗಲೀ ನಿರ್ವಚನಮಾಡಿ ಹೇಳುವುದಕ್ಕೆ ಆಗುವಂತಿಲ್ಲ ವೆಂದು ''ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯಂ'' ಎಂಬ ಪದದಿಂದ ಕರೆದಿರುವುದು ಅಲ್ಲಲ್ಲಿ (ಸೂ.ಭಾ.1.1.5 2.1.14. ಬೃ. ಭಾ. 2.4.10) ಭಾಷ್ಯದಲ್ಲಿ ಕಂಡುಬರುತ್ತದೆ. ವ್ಯವಹಾರ ದೃಷ್ಟಿಯಿಂದ ಹೀಗೆ ಇವು ಅನಿರ್ವಚನೀಯ ವಾದರೂ ಪರಮಾರ್ಥ ದೃಷ್ಟಿಯಿಂದ ನೋಡಿದರೆ ಆತ್ಮಸ್ವರೂಪವೇ ಆಗಿರುತ್ತದೆಯೆಂದು ಐತರೇಯ, ಬೃಹದಾರಣ್ಯಕ, ಛಾಂದೋಗ್ಯ ಭಾಷ್ಯಗಳಲ್ಲಿ ಆಚಾರ್ಯರು ಸ್ಪಷ್ಟಪಡಿಸಿರುತ್ತಾರೆ. ವ್ಯಾಖ್ಯಾನಗಳಲ್ಲಿ **''ತತ್ತ್ವಾನ್ಯತ್ವಾಭ್ಯಾಮ ನಿರ್ವಚನೀಯಂ''** ಎಂಬ ಮಾತನ್ನು ಕಾಣುವುದು ಅಪೂರ್ವ. **''ಅನಿರ್ವಚನೀಯ''** ಎಂದರೆ ಸತ್ತಲ್ಲದ, ಅಸತ್ತಲ್ಲದ, ಸದಸತ್ತಲ್ಲದ, ತನ್ನ ಅನುಷ್ಠಾನಕ್ಕಿಂತ ಭಿನ್ನವಲ್ಲದ, ಸಾಂಗವಲ್ಲದ, ನಿರಂಗವಲ್ಲದ ಸಾಂಗನಿರಂಗ ವಲ್ಲದ - ಹುಸಿ ತೋರಿಕೆಯ ವಸ್ತು. ಭ್ರಾಂತಿಯ ಕಾಲದಲ್ಲಿ ಅದು ಅವಿದ್ಯೆಯ

ಪರಿಣಾಮವಾಗಿ ಹುಟ್ಟಿ ಭ್ರಾಂತಿ ತೊಲಗುತ್ತಲೂ ನಾಶವಾಗುತ್ತದೆ. ಪ್ರಪಂಚವು ಬ್ರಹ್ಮದಲ್ಲಿ ಮೂಲಾವಿದ್ಯೆಯೆಂಬ ಶಕ್ತಿಯ ಪರಿಣಾಮವಾಗಿ ಹುಟ್ಟಿ ಭ್ರಾಂತಿ ತೊಲಗುತ್ತಲೂ ನಾಶವಾಗುತ್ತದೆ. ಪ್ರಪಂಚವು ಬ್ರಹ್ಮದಲ್ಲಿ ಮೂಲಾವಿದ್ಯೆ ಎಂಬ ಬಿಡಿಯಾದ ಅವಿದ್ಯೆಯ ಪರಿಣಾಮವಾಗಿ ಹುಟ್ಟುತ್ತದೆಯೆಂದು ವ್ಯಾಖ್ಯಾನ ಕಾರರ ಹೇಳಿಕೆ. ಈ ಅಭಿಪ್ರಾಯವು ಭಾಷ್ಯದಲ್ಲಿ ಎಲ್ಲಿಯೂ ಇಲ್ಲ. ಬೆಳ್ಳಿ ಎಂದು ಸುಮ್ಮನೆ ಭಾವಿಸುತ್ತಾನೆಯೇ ಹೊರತು ನಿಜವಾಗಿ ಬೆಳ್ಳಿಯು ಅಲ್ಲಿ ಇರುವುದಿಲ್ಲ'' ಎಂದು (ಸೂ. ಭಾ. 4.1.5) ಆಚಾರ್ಯರು ಬರೆದಿರುತ್ತಾರೆ. (ಸ್ವಚ-4)

ಈ ''**ಶಾಂಕರವೇದಾಂತ ನಿಘಂಟು**'' ಎಲ್ಲಾ ವೇದಾಂತ ಪ್ರವೇಶವನ್ನು ಬಯಸುವ ಜಿಜ್ಞಾಸುಗಳಿಗೂ ದಾರಿದೀವಿಗೆ ಆಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಈ ಗ್ರಂಥ ಗಾತ್ರದಲ್ಲಿ ಚಿಕ್ಕದಾಗಿದ್ದರೂ ಅತೀವ ಉಪಯುಕ್ತವೂ ಉಪೋದ್ಬಲಕವೂ ಆಗುವುದರಲ್ಲಿ ಮಹತ್ತರವಾದ ಕೊಡುಗೆಯಾಗಿದ್ದು ಬೇಗ ಪ್ರಕಟನೆಯಾಗಿ ಎಲ್ಲಾ ಆಸ್ತಿಕ ಮಹನೀಯರೂ ಇದನ್ನು ಆದರದಿಂದ ಬರಮಾಡಿಕೊಂಡು ಹೆಚ್ಚಿನ ಪ್ರಯೋಜನ ಪಡೆದುಕೊಳ್ಳುವಂತಾಗಲಿ ಎಂದು ಮನಸಾರೆ ಆನಿಸುತ್ತೇನೆ. ಗ್ರಂಥಕರ್ತರು, ಅಭಿವಂದ್ಯರು, ಪ್ರಕಾಶಕರು ಅಭಿನಂದ್ಯರು, ಪಾಠಕರೇ ಪುಣ್ಯಾತ್ಮರು.

**ಎಸ್. ರಂಗನಾಥ್**

## ‘ಹೊಸಜಿಜ್ಞಾಸುಗಳ ಪ್ರಶ್ನೆಗಳಿಗೆ ಉತ್ತರಗಳು’ ಮತ್ತು ‘ಮನಸ್ಸಿಗೆ ಉಪದೇಶ’ ಹಾಗೂ ‘ಶಾಂಕರವೇದಾಂತ ನಿಘಂಟು’ ಎಂಬ ಎರಡು ಗ್ರಂಥಗಳಿಗೂ ಉದಾರವಾಗಿ ಸಹಾಯ ಮಾಡಿರುವ ದಾನಿಗಳ ವಿವರ

### ರೂ. 5,000 ಮತ್ತು ಮೇಲ್ಪಟ್ಟು

1. ಪೂಜ್ಯ ನಿಜಾನಂದ ಭಾರತೀ ಸ್ವಾಮಿಗಳು, ಹರಿದ್ವಾರ; 2. ಶ್ರೀಮತಿ ವನಮಾಲಾ ಜೋಷಿ, ಬೆಂ.; 3. ಅಂತರಂಗ ಭಕ್ತರು, ಬೆಂ.; 4. ಶ್ರೀಮತಿ ಯಶೋದಮ್ಮ ನಾರಾಯಣರಾವ್, ಬೆಂ.

### ರೂ. 1,000 ಮತ್ತು ಮೇಲ್ಪಟ್ಟು

1. ಶ್ರೀಮತಿ ಆರ್. ಮೃದುಲ, ಬೆಂ.; 2. ಶ್ರೀಮತಿ ಜೆ. ವಿ. ನಾಗರತ್ನಮ್ಮ, ತಿಪಟೂರು; 3. ಶ್ರೀಮತಿ ನಾರಾಯಣಮ್ಮ, ಬೆಂ.; 4. ಶ್ರೀ ಹೆಚ್. ಪಿ. ಕುಂಟೋಜಿ, ಬೆಂ.; 5. ಶ್ರೀ ಟಿ. ಆರ್. ಚಂದ್ರಶೇಖರ್, ಬೆಂ.; 6. ಶ್ರೀ ಬಿ. ಕೆ. ಶ್ರೀಕಂಠಯ್ಯ, ಬೆಂ.; 7. ಶ್ರೀ ಕೆ. ಸಿ. ಸುಬ್ರಹ್ಮಣ್ಯ, ಬೆಂ.; 8. ಶ್ರೀ ವಿರೂಪಾಕ್ಷ, ಬೆಂ.; 9. ಶ್ರೀಮತಿ ವಿಜಯಮೂರ್ತಿ, ಬೆಂ; 10. ಶ್ರೀ ಕೆ. ರಾಮಚಂದ್ರ, ಬೆಂ.

### ರೂ. 500 ಮತ್ತು ಮೇಲ್ಪಟ್ಟು

1. ಶ್ರೀಮತಿ ಎಸ್.ಆರ್. ಶಾರದಮ್ಮ, ಬೆಂ.; 2. ಶ್ರೀಮತಿ ಸುಶೀಲಮ್ಮ –ಸಿದ್ದಪ್ಪ, ಬೆಂ.; 3. ಶ್ರೀಮತಿ ಮಂಗಳ ಗೌರಮ್ಮ, ಬೆಂ.; 4. ಶ್ರೀಮತಿ ಸುಮಾ ಶರ್ಮಾ, ಬೆಂ.; 5. ಶ್ರೀಮತಿ ಮಾತಾಜಿ ನಿಶಾಂತಿನಿ, ಸೂಡಿ (ಗದಗ್); 6. ಶ್ರೀ ಡಾ|| ಕೆ.ಎಲ್. ರಾಮಸ್ವಾಮಿ, ಬೆಂ.; 7. ಶ್ರೀ ಕೆ. ಎಸ್. ಪರಮೇಶ್ವರಯ್ಯ, ಬೆಂ.; 8. ಶ್ರೀ ಸೇತೂರಾಮ್, ಬೆಂ.; 9. ಶ್ರೀ ಕೆ. ಎಸ್. ಮಹೇಶ್‌ಬಾಬು, ಬೆಂ.; 10. ಶ್ರೀ ಡಿ. ಗಣಪತಿ ಶಾಸ್ತ್ರಿ, ಬೆಂ.; 11. ಶ್ರೀ ವಿ. ವೆಂಕಟಸುಬ್ಬಾಜೋಯಿಸ್, ಬೆಂ.; 12. ಡಾ|| ಹೆಚ್. ಎ. ನಾರಾಯಣ, ಬೆಂ.; 13. ಶ್ರೀ ಹೆಚ್. ಎಸ್. ನಂಜುಂಡಸ್ವಾಮಿ, ಬೆಂ.; 14. ಶ್ರೀ ಎ. ವಿ. ಲಕ್ಷ್ಮೀಪತಿ, ಬೆಂ.; 15. ಶ್ರೀ ಕೆ. ಅನಂತರಾಮಯ್ಯ, ಬೆಂ.; 16. ಅಂತರಂಗ ಭಕ್ತರು, ಬೆಂ.; 17. ಶ್ರೀ ಬಿ. ಎನ್. ಗುಜ್ರಾರ್, ಬೆಂ.; 18. ಶ್ರೀ ಟಿ. ಕೆ. ಸುಬ್ಬರಾವ್, ಬೆಂ.; 19. ಶ್ರೀ ಎ. ಸಿದ್ದಪ್ಪ, ಮೈಸೂರು; 20. ಶ್ರೀ ಕೆ. ಪ್ರಣವಕುಮಾರ್, ಆಧೋನಿ.

**ಧನ ಸಹಾಯ ಮಾಡಿರುವ ಎಲ್ಲಾ ದಾನಿಗಳಿಗೂ ಕಾರ್ಯಾಲಯದ ಪರವಾಗಿ ಕೃತಜ್ಞತಾಪೂರ್ವಕವಾದ ಅಭಿನಂದನೆಗಳು.**

# ಸಂಕೇತಾಕ್ಷರಗಳ ವಿವರಣೆ

| | | |
|---|---|---|
| ಈ. ಭಾ. | : | ಈಶಾವಾಸ್ಯೋಪನಿಷತ್ ಭಾಷ್ಯ |
| ಉ.ಸಾ.ಪ. | : | ಉಪದೇಶ ಸಾಹಸ್ರಿ ಪದ್ಯ |
| ಉ.ಸಾ.ಗ. | : | ಉಪದೇಶ ಸಾಹಸ್ರಿ ಗದ್ಯ |
| ಐ.ಭಾ. | : | ಐತರೇಯ ಭಾಷ್ಯ |
| ಐ.ಭಾ.ಭಾ.ಭಾ. | : | ಐತರೇಯ ಭಾಷ್ಯ , ಭಾಷ್ಯ ಭಾಗ |
| ಕ. ಭಾ. | : | ಕಠೋಪನಿಷತ್ ಭಾಷ್ಯ |
| ಕೇ.ಭಾ. | : | ಕೇನೋಪನಿಷತ್ ಭಾಷ್ಯ |
| ಗೀ.ಭಾ. | : | ಭಗವದ್ಗೀತಾಭಾಷ್ಯ |
| ಛಾಂ.ಭಾ. | : | ಛಾಂದೋಗ್ಯೋಪನಿಷತ್ ಭಾಷ್ಯ |
| ಛಾಂ.ಭಾ. ಭಾ. | : | ಛಾಂದೋಗ್ಯೋಪನಿಷತ್ ಭಾಷ್ಯ ಭಾಗ |
| ತೈ . | : | ತೈತ್ತಿರೀಯೋಪನಿಷತ್ |
| ತೈ . ಭಾ. ಭಾ. | : | ತೈತ್ತಿರೀಯೋಪನಿಷತ್ ಭಾಷ್ಯ ಭಾಗ |
| ಭಾ. ಭಾ. | : | ಭಾಷ್ಯ ಭಾಗ |
| ಬೃ . ಭಾ. | : | ಬೃಹದಾರಣ್ಯಕೋಪನಿಷತ್ ಭಾಷ್ಯ |
| ಬೃ .ಭಾ.ಸಂ. ಭಾ. | : | ಬೃಹದಾರಣ್ಯಕ ಭಾಷ್ಯ ಸಂಬಂಧ ಭಾಷ್ಯ |
| ಮುಂ. ಭಾ. | : | ಮುಂಡಕೋಪನಿಷತ್ ಭಾಷ್ಯ |
| ಮಾಂ. ಕಾ. ಭಾ. | : | ಮಾಂಡೂಕ್ಯಕಾರಿಕಾ ಭಾಷ್ಯ |
| ಸೂ. ಭಾ. | : | ಬ್ರಹ್ಮಸೂತ್ರ ಭಾಷ್ಯ |

*****

# ಶಾಂಕರವೇದಾಂತ ನಿಘಂಟು

## ಅ

**ಅಕ್ಷರಮ್:-** ನಿರುಪಾಧಿಕವಾದ ಪರಬ್ರಹ್ಮ (ಗೀ.ಭಾ.೭-೩) ಇದರಲ್ಲಿ ಯಾವ ವಿಶೇಷವೂ ಇಲ್ಲದ್ದರಿಂದ ಇದನ್ನು ಅಸ್ಥೂಲ, ಅನಣು-ಎಂದು ಮುಂತಾಗಿ (ಬೃ.೩-೮-೮) ರಲ್ಲಿ ವರ್ಣಿಸಿರುತ್ತದೆ. ಇದು ಯಾವ ಇಂದ್ರಿಯಕ್ಕೂ ಗೋಚರವಿಲ್ಲದಿದ್ದರೂ ಎಲ್ಲರಿಗೂ ಆತ್ಮನಾಗಿರುವದರಿಂದ ವಿಶೇಷಗಳನ್ನು ಅಲ್ಲಗಳೆದರೆ ಇದನ್ನು ನಾನೇ ಎಂದು ಅರಿತುಕೊಳ್ಳಬಹುದು. (ಮುಂ.ಭಾ.೧-೧-೬) ಇದರ ಆಳ್ವಿಕೆಗೆ ಒಳಪಟ್ಟು ಜಗತ್ತಿನ ವ್ಯವಹಾರವು ನಿಯಮದಿಂದ ಸಾಗಿರುತ್ತದೆ (ಬೃ.೩-೮-೯) ಇದನ್ನು ಅರಿಯದ್ದರಿಂದ ಸಂಸಾರವೂ, ಅರಿತುಕೊಳ್ಳುವದರಿಂದ ಮುಕ್ತಿಯೂ ಆಗುವವು (ಬೃ.೩-೮-೧೧) ಇದನ್ನು ತಿಳಿಯುವ ವಿದ್ಯೆಗೆ 'ಪರವಿದ್ಯೆ' ಎಂದು ಹೆಸರು. ಅಕ್ಷರೋಪಾಸಕರು ಆ ಪರಬ್ರಹ್ಮವನ್ನೇ ಸೇರುವರು; ಆದರೆ ಸೋಪಾಧಿಕನಾದ ಈಶ್ವರನ ಉಪಾಸಕರಿಗಿಂತಲೂ ಅವರಿಗೆ ಕ್ಲೇಶವು ಹೆಚ್ಚು (ಗೀ.ಭಾ.೧೨-೫).

**ಅಕ್ಷರಮ್ ೨:-** ನಾಮರೂಪಗಳ ಬೀಜವಾಗಿರುವ ಅವ್ಯಾಕೃತ (ಮುಂ.ಭಾ. ೨-೧-೨) ಇದರಿಂದ ಹುಟ್ಟುವ ಕಾರ್ಯವೆಲ್ಲವೂ ನಾಶವಾಗುವದರಿಂದ ಕ್ಷರವು. ಕ್ಷರವು ನಾಶವಾದರೂ ಇದು ನಾಶವಾಗುವದಿಲ್ಲವಾದ್ದರಿಂದಲೂ (ಗೀ.ಭಾ. ೧೫-೧೬), ಕಾಲತ್ರಯವನ್ನೂ ಮೀರಿರುವದರಿಂದಲೂ; (ಬೃ.ಭಾ.೩-೮-೭, ಮುಂ. ಭಾ.೧) ಇದು 'ಅಕ್ಷರ'ವೆನಿಸುತ್ತದೆ. ಇದೇ ಪರಮಾತ್ಮನ ಮಾಯಾಶಕ್ತಿ (ಗೀ.ಭಾ.೧೫-೧೬) ಇದು ಅಕ್ಷರವೆಂಬ ಪರಬ್ರಹ್ಮದಲ್ಲಿ ಓತಪ್ರೋತವಾಗಿರುತ್ತದೆ. (ಮುಂ.ಭಾ.೨-೧-೨). ಇದಕ್ಕಿಂತಲೂ ಹೆಚ್ಚಿನದಾದ್ದರಿಂದ ಬ್ರಹ್ಮಕ್ಕೆ ಮುಖ್ಯಾರ್ಥದಲ್ಲಿ ಅಕ್ಷರವೆಂದು ಹೆಸರು. (ಮುಂ.ಭಾ.೨-೧-೨,ಗೀ.೮-೨೧)

**ಅಕ್ಷರಮ್ ೩:-** ಓಂಕಾರವೆಂಬ ಅಕ್ಷರವು; ಬ್ರಹ್ಮದ ಹೆಸರು (ಗೀ.೮-೧೩, ಸೂ.ಭಾ.೧-೩-೧೦).

**ಅಜಾತಿ:-** ಅಕ್ಷರವು ಅಥವಾ ಪರಬ್ರಹ್ಮವು ಹುಟ್ಟಿಲ್ಲದ್ದು. ಇದಕ್ಕೆ ಅವಯವ ಗಳಿಲ್ಲದ್ದರಿಂದ ಅವಯವವೈಷಮ್ಯದಿಂದ ಪರಿಣಾಮವಾಗಿ ಹುಟ್ಟುವ ಸಂಭವವೇ ಇಲ್ಲ. (ಮಾಂ.ಕಾ.ಭಾ.೩-೨). ಆಕಾಶವು ಘಟವೇ ಮುಂತಾದವುಗಳ ಹುಟ್ಟುವಿಕೆ ಯಿಂದ ಘಟಾಕಾಶವೇ ಮುಂತಾದ ರೂಪಗಳಿಂದ ಹುಟ್ಟುವಂತೆ ತೋರುವ ಹಾಗೆ ಪರಮಾತ್ಮನೂ ಜೀವರೂಪದಿಂದ ಹುಟ್ಟುವಂತೆ ತೋರುತ್ತಾನೆ. ಆಕಾಶವು ಪೃಥಿವ್ಯಾದಿಗಳ ರೂಪದಿಂದ ಹುಟ್ಟಿ ಘಟವಾಗುವಂತೆ ತೋರಿದರೂ ನಿಜವಾಗಿ

ಆಕಾಶವೇ ಆಗಿರುವಂತೆ ಆತ್ಮನೂ ಶರೀರೇಂದ್ರಿಯಗಳ ಗುಂಪಿನ ರೂಪದಿಂದ ತೋರಿ ಕೊಳ್ಳುತ್ತಾನೆ. (ಮಾಂ. ಕಾ.ಭಾ.೩-೩). ಹುಟ್ಟುವ ಸ್ವಭಾವವೇ ಇಲ್ಲದ ಬ್ರಹ್ಮಕ್ಕೆ ನಿಜವಾಗಿ ಹುಟ್ಟು ಇದೆ ಎಂದು ಕೆಲವರು ವಾದಿಗಳು ಹೇಳುವದುಂಟು; ಆದರೆ ಹುಟ್ಟಿಲ್ಲದ್ದು ಅಮೃತವು, ಹುಟ್ಟುವದು ಮರ್ತ್ಯವು. ಆದ್ದರಿಂದ ಅವರ ಮತದಲ್ಲಿ ಅಮೃತಸ್ವಭಾವವಾಗಿರುವ ಬ್ರಹ್ಮವು ಮರ್ತ್ಯವಾಗುವದೆಂದು ಹೇಳಿದಂತೆ ಆಗುವದು. ಅದು ಎಂದಿಗೂ ಯುಕ್ತವಲ್ಲ. (ಮಾಂ.ಕಾ.ಭಾ.೩-೨೦, ೪-೯, ೪-೨೯.)

**ಅಜ್ಞಾನಮ್:-** ಅರಿಯದಿರುವದು. ಅಗ್ರಹಣ (ಮಾಂ.ಕಾ.ಭಾ.೧-೧೩) ಅಪ್ರತಿಬೋಧ (ಮಾಂ.ಕಾ.ಭಾ.೧-೧೩) ಅಪ್ರಬೋಧ (ಸೂ.ಭಾ.೪-೧-೩), ಅವಿದ್ಯಾ (ಮಾಂ.ಕಾ.ಭಾ.೩-೩೬) ಅನಿಶ್ಚಯ (ಮಾಂ.ಕಾ.ಭಾ.೨-೧೭), ಅನವಗಮ (ಬೃ.ಭಾ.೧-೪-೧೦)—ಮುಂತಾದ ಶಬ್ದಗಳೆಲ್ಲವನ್ನೂ ಒಂದೇ ಅರ್ಥದಲ್ಲಿ ಭಾಷ್ಯಕಾರರು ಉಪಯೋಗಿಸಿರುತ್ತಾರೆ. ಈ ಶಬ್ದಗಳಿಗೆ ಮುಖ್ಯಾರ್ಥವು ಅರಿಯದಿರುವದು ಎಂದು. ವೇದಾಂತಶಾಸ್ತ್ರದಲ್ಲಿ ಬ್ರಹ್ಮವನ್ನು ಅರಿಯದಿರುವದೇ ಅಜ್ಞಾನವು. ಈ ಶಬ್ದವನ್ನು ಜ್ಞಾನಕ್ಕೆ ಬೇರೆಯಾದದ್ದು, ವಿರುದ್ಧವಾದದ್ದು-ಎಂಬ ಅರ್ಥ ದಲ್ಲಿಯೂ ಉಪಯೋಗಿಸುವದುಂಟು. ಆಗ ಅಜ್ಞಾನವೆಂದರೆ ತಪ್ಪು ತಿಳಿವಳಿಕೆ. ಆತ್ಮಾನಾತ್ಮಗಳನ್ನು ಒಂದನ್ನು ಮತ್ತೊಂದು ತಿಳಿಯುವದು, ಒಂದರ ಧರ್ಮಗಳನ್ನು ಮತ್ತೊಂದರವೆಂದು ಭಾವಿಸುವದು, ಅವಿದ್ಯೆ ಎಂದು ಸೂತ್ರಭಾಷ್ಯದ ಉಪೋದ್ಘಾತ ದಲ್ಲಿ ಬರೆದಿರುತ್ತದೆ. ಈ ಅರ್ಥದಲ್ಲಿ ಇದನ್ನು ಅಧ್ಯಾಸವೆಂದು ಶಂಕರಾಚಾರ್ಯರು ಕರೆದಿರುತ್ತಾರೆ. ಅಧ್ಯಾಸಶಬ್ದದ ವಿವರಣೆಯಲ್ಲಿ ಈ ವಿಷಯವನ್ನು ಮತ್ತೆ ತೆಗೆದು ಕೊಳ್ಳುವೆವು. ಬ್ರಹ್ಮವು ನಿಜವಾಗಿ ಯಾವ ವಿಕಾರವನ್ನೂ ಹೊಂದಿಲ್ಲವಾದರೂ ಅದರ ನಿಜಸ್ವರೂಪವನ್ನು ಅರಿತುಕೊಳ್ಳದೆ ಇರುವುದರಿಂದ ಅದನ್ನು ಪ್ರಪಂಚವೆಂದು ಜನರು ಕಲ್ಪಿಸಿಕೊಂಡಿರುತ್ತಾರೆ. ನಸುಗತ್ತಲೆಯಲ್ಲಿ ಕಾಣುವ ಹಗ್ಗವನ್ನು ಹಗ್ಗವೇ ಎಂದು ನಿಶ್ಚಯಿಸಿಕೊಳ್ಳದೆ ಇರುವದರಿಂದ ಅದು ಹಾವು, ಕೋಲು, ನೀರಿನಕೋಡಿ ಎಂದು ಮುಂತಾಗಿ ಜನರು ಬಗೆಬಗೆಯಾಗಿ ಕಲ್ಪಿಸಿಕೊಳ್ಳುವಂತೆ ಅಜ್ಞಾನದ ಮಬ್ಬಿನಿಂದ ಎಲ್ಲರ ಆತ್ಮನಾದ ಬ್ರಹ್ಮವನ್ನೇ ಚೇತನಾಚೇತನರೂಪವಾದ ಜಗತ್ತಿನ ರೂಪದಲ್ಲಿ ಕಲ್ಪಿಸುತ್ತಿರುವರು ಎಂಬುದೇ ಉಪನಿಷತ್ಸಿದ್ಧಾಂತವು (ಮಾಂ.ಕಾ.ಭಾ.೨-೧೭).

**ಅಧಿಷ್ಠಾನಮ್:-** ಇಚ್ಛೆ, ದ್ವೇಷ, ಸುಖ, ದುಃಖ, ಜ್ಞಾನ- ಮುಂತಾದವು ಗಳು ಹೊರತೋರಿಕೊಳ್ಳುವದಕ್ಕೆ ಆಶ್ರಯವಾದ ಶರೀರ. ಭಗವದ್ಗೀತೆಯ ಭಾಷ್ಯದಲ್ಲಿಯೂ (೧೮-೧೪) ಮಿಕ್ಕ ಭಾಷ್ಯಗಳಲ್ಲಿಯೂ ಈ ಅರ್ಥದಲ್ಲಿಯೇ ಅಧಿಷ್ಠಾನ ಶಬ್ದವನ್ನುಪಯೋಗಿಸಿದೆ. ಯಾವದರಲ್ಲಿ ಭ್ರಾಂತಿಯಿಂದ ತೋರಿಕೆಯ

ವಸ್ತುಗಳನ್ನು ಆರೋಪಿಸುವರೋ ಅಂಥ ವಸ್ತು ; ಹಾವಿಗೆ ಹಗ್ಗವೂ ಬೆಳ್ಳಿಗೆ ಕಪ್ಪೆಯ ಚಿಪ್ಪೂ ಅಧಿಷ್ಠಾನವು ಎಂಬರ್ಥದಲ್ಲಿಯೂ ಈಚಿನ ವೇದಾಂತಿಗಳು ಈ ಶಬ್ದವನ್ನು ಉಪಯೋಗಿಸುತ್ತಾರೆ; ಆದರೆ ಭಾಷ್ಯದಲ್ಲಿ ಈ ಅರ್ಥದಲ್ಲಿ ಪ್ರಯೋಗವಿಲ್ಲ.

**ಅಧ್ಯಾಸಃ, ಅಧ್ಯಾರೋಪಃ :-** ಒಂದು ವಸ್ತುವಿನಲ್ಲಿಲ್ಲದ ಸ್ವರೂಪವನ್ನು ಅದರಲ್ಲಿ ಹುಟ್ಟುಗಟ್ಟುವ ತಪ್ಪು ತಿಳಿವಳಿಕೆ. ಶರೀರವೇ ನಾನೆಂಬುದು ಅಧ್ಯಾಸ, ಮಿಥ್ಯಾಜ್ಞಾನ ಎಂದು ತಾರ್ಕಿಕರೇ ಮೊದಲಾದವರೂ ಒಪ್ಪಿದ್ದರು. ಆದರೆ ಶರೀರಕ್ಕಿಂತ ಬೇರೆಯಾಗಿ ''ನಾನು'' ಎಂದು ಅರಿಯಬರುವ ಆತ್ಮಸ್ವರೂಪವೂ ನಿಜವಾಗಿರುವದಲ್ಲ, ಅದೂ ಆತ್ಮನಲ್ಲಿ ಕಲ್ಪಿತವಾಗಿರುವ ರೂಪವೇ ಎಂದು ಶಂಕರಾಚಾರ್ಯರು ತಮ್ಮ ಸೂತ್ರಭಾಷ್ಯದ ಮುನ್ನುಡಿಯಲ್ಲಿ ತಿಳಿಸಿರುತ್ತಾರೆ. ನಾನು, ನೀನು- ಎಂದು ವಿಂಗಡಿಸುವದಕ್ಕೆ ಬಾರದ ಶುದ್ಧವಾದ ಆತ್ಮನಲ್ಲಿ ಅನಾತ್ಮವಾದ ಅಂತಃಕರಣವೇ ಮುಂತಾದವುಗಳನ್ನೂ ಅವುಗಳಲ್ಲಿ ಆತ್ಮನನ್ನೂ ಭ್ರಾಂತಿಯಿಂದ ಹುಟ್ಟುಗಟ್ಟುವದೇ ಎಲ್ಲಕ್ಕೂ ಮೂಲವಾದ ಅಧ್ಯಾಸವು ಎಂಬುದು ಶಾಂಕರಾದ್ವೈತದ ಸಿದ್ಧಾಂತವು. ಈ ಅಧ್ಯಾಸಕ್ಕೆ 'ಅವಿದ್ಯೆ' ಎಂಬ ಹೆಸರೂ ಉಂಟು.

ಅಧ್ಯಾಸವೆಂದರೆ **'ಅದಲ್ಲದ್ದರಲ್ಲಿ ಅದೆಂಬ ಬುದ್ಧಿ'** ಎಂದು ಭಾಷ್ಯಕಾರರು ಸೂತ್ರಭಾಷ್ಯದಲ್ಲಿ ಕಂಠೋಕ್ತವಾಗಿ ಹೇಳಿರುತ್ತಾರೆ. ಆದ್ದರಿಂದ ತಪ್ಪಾದ ತಿಳಿವಳಿಕೆ ಯಿಂದ ಒಂದು ವಸ್ತುವನ್ನು ಮತ್ತೊಂದೆಂದು ಭಾವಿಸುವದೇ ಅಧ್ಯಾಸವು. ವಸ್ತುವಿನಲ್ಲಿ ಹುಟ್ಟುಗಟ್ಟಿದ ಹುಸಿತೋರಿಕೆಯ ವಸ್ತುವನ್ನು **ಅರ್ಥಾಧ್ಯಾಸ** ಎಂದು ಕರೆಯುವ ವಾಡಿಕೆಯು ವ್ಯಾಖ್ಯಾನಗಳಲ್ಲಿ ಕಂಡುಬರುತ್ತದೆ; ಆದರೆ ಭಾಷ್ಯದಲ್ಲಿ ಆ ಶಬ್ದವನ್ನು ಬಳಸಿರುವದಿಲ್ಲ.

ಆತ್ಮನ ದೇಹಾದಿಗಳನ್ನೂ ಆತ್ಮನ ರೂಪವೆಂದೇ ಕಲ್ಪಿಸಿಕೊಂಡು ಆ ಕಲ್ಪಿತ ರೂಪವನ್ನೇ ಆತ್ಮಸ್ವರೂಪವನ್ನು ತಿಳಿಸುವದಕ್ಕೆ ವೇದಾಂತದಲ್ಲಿ ಉಪಾಯವಾಗಿ ಮಾಡಿಕೊಳ್ಳುವದುಂಟು; ಈ ಕಲ್ಪನೆಗೂ ಅಧ್ಯಾರೋಪ ಎಂಬ ಹೆಸರನ್ನು ಉಪಯೋಗಿಸುತ್ತಾರೆ. ಆತ್ಮಸ್ವರೂಪವನ್ನು ತಿಳಿಸಿಕೊಟ್ಟ ಬಳಿಕ ಇಂಥ ಕಲ್ಪಿತ ರೂಪವನ್ನು ಅಲ್ಲಗಳೆಯುವದಕ್ಕೆ **'ಅಪವಾದ'** ಎಂಬ ಹೆಸರನ್ನು ಉಪಯೋಗಿಸುವರು. ಆಚಾರ್ಯರು **'ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ'** ಎಂಬ ಸಂಪ್ರದಾಯವಿದರ ಉಕ್ತಿಯನ್ನು ಗೀತಾಭಾಷ್ಯ (೧೩-೧೩)ದಲ್ಲಿ ಉದಾಹರಿಸಿರು ತ್ತಾರೆ. ಇಲ್ಲಿಯೂ ಅಧ್ಯಾರೋಪವೆಂದರೆ ಹುಟ್ಟುಗಟ್ಟುವಿಕೆ ಎಂದೇ ಅರ್ಥವಾದರೂ ಉಪದೇಶಕ್ಕಾಗಿ ಹುಟ್ಟುಗಟ್ಟಿದವರು ಜ್ಞಾನಿಗಳಾದ್ದರಿಂದ ಈ ಅಧ್ಯಾರೋಪವು ಭ್ರಾಂತಿಯಲ್ಲ.

ಶ್ರುತಿಯಲ್ಲಿ 'ನಾಮವನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು' ಎಂದು ಮುಂತಾಗಿ ಉಪದೇಶಿಸಿರುತ್ತದೆ. ಪ್ರತಿಮೆಯೇ ಮುಂತಾದವುಗಳನ್ನು ವಿಷ್ಣು ಮುಂತಾದ ದೇವತೆಗಳೆಂದು ಉಪಾಸನೆ ಮಾಡಬೇಕೆಂದು ಪುರಾಣಗಳಲ್ಲಿ ಹೇಳಿರುತ್ತದೆ. ಅದನ್ನೂ **'ಅಧ್ಯಾಸ'** ಎಂದು ಕರೆಯುವದುಂಟು. ಆದರೆ ಇದೂ ಶಾಸ್ತ್ರದಲ್ಲಿ ಹೇಳಿದ್ದಾದ್ದರಿಂದ ಭ್ರಾಂತಿಜ್ಞಾನವಲ್ಲ.

**ಅನಿರ್ವಚನೀಯ:-** ಪರಮಾತ್ಮನಲ್ಲಿ ಕಲ್ಪಿತವಾಗಿರುವ ನಾಮರೂಪಗಳು ಆತನ ಸ್ವರೂಪವೆಂದಾಗಲಿ ಆತನಿಗಿಂತ ಬೇರೆಯೊಂದಾಗಲಿ ನಿರ್ವಚನಮಾಡಿ ಹೇಳುವದಕ್ಕೆ ಆಗುವಂತಿಲ್ಲವೆಂದು 'ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯೇ' ಎಂಬ ಪದದಿಂದ ಕರೆದಿರುವದು ಅಲ್ಲಲ್ಲಿ (ಸೂ.ಭಾ.೧-೧-೫, ೨-೧-೧೪, ಬೃ.ಭಾ.೨-೪-೧೦) ಭಾಷ್ಯದಲ್ಲಿ ಕಂಡುಬರುತ್ತದೆ. ವ್ಯವಹಾರದೃಷ್ಟಿಯಿಂದ ಹೀಗೆ ಇವು ಅನಿರ್ವಚನೀಯ ವಾದರೂ ಪರಮಾರ್ಥದೃಷ್ಟಿಯಿಂದ ನೋಡಿದರೆ ಆತ್ಮಸ್ವರೂಪವೇ ಆಗಿರುತ್ತವೆ ಎಂದು ಐತರೇಯ, ಬೃಹದಾರಣ್ಯಕ, ಛಾಂದೋಗ್ಯಭಾಷ್ಯಗಳಲ್ಲಿ ಆಚಾರ್ಯರು ಸ್ಪಷ್ಟಪಡಿಸಿರುತ್ತಾರೆ.

ವ್ಯಾಖ್ಯಾನಗಳಲ್ಲಿ ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯ ಎಂಬ ಮಾತನ್ನು ಕಾಣುವದು ಅಪೂರ್ವ. **'ಅನಿರ್ವಚನೀಯ'** ವೆಂದರೆ ಸತ್ತಲ್ಲದ, ಅಸತ್ತಲ್ಲದ, ಸದಸತ್ತಲ್ಲದ; ತನ್ನ ಅಧಿಷ್ಠಾನಕ್ಕಿಂತ ಭಿನ್ನವಲ್ಲದ, ಅಭಿನ್ನವಲ್ಲದ, ಭಿನ್ನಾಭಿನ್ನವಲ್ಲದ; ಸಾಂಶವಲ್ಲದ, ನಿರಂಶವಲ್ಲದ, ಸಾಂಶನಿರಂಶವಲ್ಲದ-ಹುಸಿತೋರಿಕೆಯ ವಸ್ತು. ಭ್ರಾಂತಿಯ ಕಾಲದಲ್ಲಿ ಅದು ಅವಿದ್ಯೆಯ ಪರಿಣಾಮವಾಗಿ ಹುಟ್ಟಿ ಭ್ರಾಂತಿ ತೊಲಗುತ್ತಲೂ ನಾಶವಾಗುತ್ತದೆ. ಪ್ರಪಂಚವು ಬ್ರಹ್ಮದಲ್ಲಿ **ಮೂಲಾವಿದ್ಯೆ**ಯೆಂಬ ಶಕ್ತಿಯ ಪರಿಣಾಮವಾಗಿ ಹುಟ್ಟಿಕೊಂಡಿರುತ್ತದೆ; ಕಪ್ಪೆಯ ಚಿಪ್ಪಿನಲ್ಲಿ ಹುಸಿ ಬೆಳ್ಳಿಯು ತೂಲಾವಿದ್ಯೆಯೆಂಬ ಬಿಡಿಯಾದ ಅವಿದ್ಯೆಯ ಪರಿಣಾಮವಾಗಿ ಹುಟ್ಟಿರುತ್ತದೆ- ಎಂದು ವ್ಯಾಖ್ಯಾನಕಾರರ ಹೇಳಿಕೆ. ಈ ಅಭಿಪ್ರಾಯವು ಭಾಷ್ಯದಲ್ಲಿ ಎಲ್ಲಿಯೂ ಇಲ್ಲ. 'ಬೆಳ್ಳಿ ಎಂದು ಸುಮ್ಮನೆ ಭಾವಿಸುತ್ತಾನೆಯೇ ಹೊರತು ನಿಜವಾಗಿ ಬೆಳ್ಳಿಯು ಅಲ್ಲಿರುವದಿಲ್ಲ' ಎಂದು (ಸೂ.ಭಾ.೪-೧-೫) ಆಚಾರ್ಯರು ಬರೆದಿರುತ್ತಾರೆ.

**ಅನುಬೋಧಃ :-** ಶಾಸ್ತ್ರಾಚಾರ್ಯರ ಉಪದೇಶವನ್ನು ಅನುಸರಿಸಿ ಅರಿತುಕೊಳ್ಳುವದು. (ಮಾಂ.ಕಾ.ಭಾ.೩-೩೨). ಶಾಸ್ತ್ರದಿಂದಾದ ತಿಳಿವಳಿಕೆ, ಗುರುಗಳಿಂದಾದ ತಿಳಿವಳಿಕೆ ಮತ್ತು ತನ್ನ ಅನುಭವ- ಈ ಮೂರೂ ಒಂದಾಗಬೇಕೆಂಬ ಅಭಿಪ್ರಾಯ ವನ್ನು ಆಚಾರ್ಯರು ಅನುಬೋಧ, ಅನುದರ್ಶನ-ಮುಂತಾದ ಶಬ್ದಗಳಲ್ಲಿರುವ 'ಅನು' ಎಂಬ ಉಪಸರ್ಗದ ಅರ್ಥಸ್ವಾರಸ್ಯವನ್ನು ತಿಳಿಸುವದರ ಮೂಲಕ ವಿವರಿಸಿರುತ್ತಾರೆ. ಗೀ.ಭಾ.೧೩-೩೦, ಛಾಂ. ಭಾ.೮-೨-೬,ಕ.ಭಾ ೨-೫-೧೨.

**ಅನುಭವಃ :-** ಬ್ರಹ್ಮವಿದ್ಯೆಯಲ್ಲಿ ಶ್ರುತ್ಯಾದಿಗಳಂತೆ ಅನುಭವಾದಿಗಳೂ ಪ್ರಮಾಣವಾಗಿರುವವು; ಏಕೆಂದರೆ ಬ್ರಹ್ಮವಿದ್ಯೆಯು ಭೂತವಸ್ತುವಿಷಯವಾಗಿದೆ, ಮತ್ತು ಅನುಭವದಲ್ಲಿಯೇ ಕೊನೆಕಾಣಬೇಕಾಗಿದೆ-(ಸೂ.ಭಾ.೧-೧-೨) ಎಂದು ಆಚಾರ್ಯರು ಬರೆದಿರುತ್ತಾರೆ. ಈ ಅನುಭವವು ಪ್ರತ್ಯಕ್ಷಾನುಮಾನಗಳಿಂದಾಗುವ ಜ್ಞಾನಕ್ಕಿಂದ ಬೇರೆ (ಬೃ.ಭಾ.ಸಂ.ಭಾ.) ಶಾಸ್ತ್ರಾಚಾರ್ಯರ ಉಪದೇಶದಿಂದ ಇದು ಆಗುವದು. 'ಅನುಬೋಧ' ಎಂಬ ಶಬ್ದವನ್ನು ನೋಡಿ.

**ಅನುಮಾನಮ್ :-** ಪ್ರತ್ಯಕ್ಷವಾದ ಗುರುತಿನಿಂದ ನಿಶ್ಚಯಿಸುವದು; ಇದನ್ನು ತರ್ಕವೆಂದೂ ಕರೆಯುವರು. ಆತ್ಮನನ್ನು ಕೇವಲ ಅನುಮಾನದಿಂದ ಅರಿಯುವದಕ್ಕೆ ಎಂದಿಗೂ ಆಗುವದಿಲ್ಲ. ಸೂ.ಭಾ.೧-೧-೨, ೨-೧-೬, ಐ.ಭಾ.೧ ನೆಯ. ಅಧ್ಯಾಯ [illegible] ಉಪಸಂಹಾರ (ಭಾ.ಭಾ.೬೩), ಬೃ.ಭಾ.೨-೧ರ ಉಪಸಂಹಾರ.

**ಅನ್ತಃಕರಣಮ್ :-** ಅದ್ವಿತೀಯಾತ್ಮನಿಗೆ ಅನೇಕತ್ವವನ್ನೂ ಸಂಸಾರಿತ್ವವನ್ನೂ ತೋರಿಸುವ ಉಪಾಧಿ. ಇದನ್ನು ಮನಸ್ಸು, ಬುದ್ಧಿ, ವಿಜ್ಞಾನ, ಚಿತ್ತ- ಎಂದೂ ಕರೆಯುವರು. ವಿಷಯಗಳನ್ನು ಒಂದೊಂದಾಗಿ ಇಂದ್ರಿಯಗಳ ಮೂಲಕ ಅರಿಯುವ ಸಾಧನವಿದು. ಕಾಮ, ಸಂಕಲ್ಪ, ಸಂಶಯ, ಶ್ರದ್ಧೆ, ಜ್ಞಾನ, ಭಯ-ಮುಂತಾದವುಗಳೆಲ್ಲವೂ ಮನಸ್ಸಿನ ವೃತ್ತಿಗಳು. ಸಂಶಯಾದಿವೃತ್ತಿಯುಳ್ಳ ಅಂತಃಕರಣವನ್ನು ಮನಸ್ಸೆಂದೂ ನಿಶ್ಚಯಾದಿವೃತ್ತಿಯುಳ್ಳದ್ದನ್ನು ಬುದ್ಧಿಯೆಂದೂ ವಿಂಗಡಿಸಿ ಕರೆಯುವರು. ಸೂ.ಭಾ.೨-೩-೩೨.

**ಅನ್ತ್ಯಂ ಪ್ರಮಾಣಮ್ :-** ಆತ್ಮನಲ್ಲಿ ತೋರುವ ಪ್ರಮಾತೃತ್ವವೆಂಬ ಅಧ್ಯಾಸವನ್ನು ತೆಗೆದುಹಾಕುವದರಿಂದ ಪ್ರಮಾಣಪ್ರಮೇಯವ್ಯವಹಾರವನ್ನೇ ಕೊನೆಗೊಳಿಸುವ, ಕೊನೆಯ ಪ್ರಮಾಣವಾದ, ಶಾಸ್ತ್ರ. ಗೀ.ಭಾ.೨-೧೮, ೨-೬೯. ಅದ್ವಿತೀಯಾತ್ಮನನ್ನು ತಿಳಿಸುವದರಿಂದ ಈ ಪ್ರಮಾಣದಿಂದಾದ ಜ್ಞಾನವುಂಟಾದ ಬಳಿಕ ಏನು? ಏತರಿಂದ? ಹೇಗೆ?- ಎಂಬ ಆಕಾಂಕ್ಷೆಯುಂಟಾಗುವುದಿಲ್ಲ. ಸೂ.ಭಾ. ೨-೧-೧೪.

**ಅನ್ಯೋನ್ಯಾಧ್ಯಾಸಃ :-** ಆತ್ಮ, ಅನಾತ್ಮ-ಇವುಗಳಲ್ಲಿ ಒಂದನ್ನು ಒಂದರಲ್ಲಿಯೂ ಒಂದರ ಧರ್ಮಗಳನ್ನು ಇನ್ನೊಂದರಲ್ಲಿಯೂ ಅಧ್ಯಾಸಮಾಡುವದು. ಅಧ್ಯಾಸಭಾಷ್ಯ ; ಗೀ.ಭಾ.೧೩-೨೬. ಆತ್ಮನನ್ನು ಅನಾತ್ಮದಲ್ಲಿ ಅಧ್ಯಾಸಮಾಡುವಾಗ ಆತ್ಮನಿಗೆ ಸಂಸರ್ಗದ ಅಧ್ಯಾಸವೇ ಹೊರತು ಸ್ವರೂಪದ ಅಧ್ಯಾಸವಾಗುವದಿಲ್ಲ ಎಂದು ವ್ಯಾಖ್ಯಾನಕಾರರು ಬರೆಯುತ್ತಾರೆ. ಆದರೆ ಇದಕ್ಕೆ ಭಾಷ್ಯದ ಆಧಾರವು ಕಾಣುವದಿಲ್ಲ.

**ಅನ್ವೇಷಣಮ್ :-** ಆತ್ಮನನ್ನು ಹುಡುಕುವದು; ಶಾಸ್ತ್ರಾಚಾರ್ಯರ ಉಪದೇಶ

ದಿಂದ ಆತ್ಮನನ್ನು ಪರೋಕ್ಷವಾಗಿ ಅರಿತುಕೊಳ್ಳುವದು. ಛಾಂ.ಭಾ.೮-೧-೧, ೮-೭-೧. ಆತ್ಮನು ನಮ್ಮೆಲ್ಲರ ಸ್ವರೂಪವೇ ಆಗಿದ್ದರೂ ತತ್ತ್ವವನ್ನು ತಿಳಿದುಕೊಳ್ಳದಿರುವ ನಿಮಿತ್ತದಿಂದ ದೇಹಾದಿಗಳೇ ನಾವೆಂಬ ತಪ್ಪು ತಿಳಿವಳಿಕೆಯುಂಟಾಗುತ್ತದೆ. ಹೀಗೆ ದೇಹಾದಿಗಳೇ ತಾನೆಂಬ ತಿಳಿವಳಿಕೆಯುಳ್ಳವರಿಗೆ ಆತ್ಮನು ಅನ್ವೇಷ್ಟವ್ಯನಾಗುತ್ತಾನೆ, ಶಾಸ್ತ್ರಾಚಾರ್ಯರ ಉಪದೇಶದಿಂದ ಅರಿತುಕೊಳ್ಳಬೇಕಾದವನಾಗುತ್ತಾನೆ. ಸೂ.ಭಾ. ೧-೧-೧೭.

**ಅಪರಂ ಬ್ರಹ್ಮ :-** ಕಡಿಮೆಯ ಬ್ರಹ್ಮ. ಅವಿದ್ಯಾಕೃತವಾದ ನಾಮರೂಪಾದಿ ಗಳಿಂದ ಕೂಡಿರುವ ಉಪಾಸ್ಯಬ್ರಹ್ಮವು ಅಪರಬ್ರಹ್ಮವು. ಇದನ್ನು ಕಾರ್ಯಬ್ರಹ್ಮ, ಸಗುಣಬ್ರಹ್ಮ, ಸೋಪಾಧಿಕಬ್ರಹ್ಮ- ಎಂದೂ ಕರೆಯುವರು. ಸೂ.ಭಾ. ೪-೩-೭, ೪-೩-೧೪. ಪರಬ್ರಹ್ಮವನ್ನೇ ಮನೋಮಯತ್ವಾದಿಗಳಿಂದ ಕೂಡಿರುವದೆಂದು ಉಪಾಸನೆಗಾಗಿ ಉಪದೇಶಿಸಿರುತ್ತದೆ, ಇದಕ್ಕೆ ಅಪರಬ್ರಹ್ಮವೆಂದು ಹೆಸರು. ಸೂ.ಭಾ.೪-೩-೯.

**ಅಪೌರುಷೇಯಮ್ :-** ಭಾರತವೇ ಮುಂತಾದ ಗ್ರಂಥದಂತೆ ಸ್ವತಂತ್ರನಾದ ಕರ್ತೃವು ಮಾಡಿದ್ದೆಂದು ಯಾವ ಸ್ಮೃತಿಯಲ್ಲಿಯೂ ಹೇಳಿಲ್ಲವಾದ್ದರಿಂದಲೂ ಶಬ್ದಾರ್ಥಸಂಬಂಧವು ನಿತ್ಯವಾಗಿರುವದರಿಂದಲೂ ವೇದವು ಯಾವ ಪುರುಷನೂ ಮಾಡಿದ್ದಲ್ಲವೆಂದು ಪೂರ್ವಮೀಮಾಂಸಕರು ಹೇಳುತ್ತಾರೆ. ಇದನ್ನು ಉತ್ತರ ಮೀಮಾಂಸದಲ್ಲಿಯೂ ಒಪ್ಪಿರುತ್ತದೆ. (ಸೂ.ಭಾ.೧-೨-೨,೧-೩-೨೯). ಆದರೆ ವೇದವು ಮನುಷ್ಯನ ನಿಃಶ್ವಾಸದಂತೆ ಲೀಲಾನ್ಯಾಯದಿಂದ ಬ್ರಹ್ಮದಿಂದ ಉಂಟಾಗಿರು ವದೆಂದೂ ಸೂ.ಭಾ. ೧-೧-೩, ಪರಮಾರ್ಥವಾಗಿ ಇದು ಆತ್ಮಸ್ವರೂಪವಾಗಿಯೇ ಸತ್ಯವಾಗಿರುವದೆಂದೂ (ತೈ.ಭಾ.೨-೩, ಭಾ.ಭಾ. ೧೩೩), ತನ್ನ ರೂಪದಿಂದ ಅದೂ ಅನೃತವೇ ಎಂದೂ (ಸೂ.ಭಾ.೪-೧೩) ಆಚಾರ್ಯರು ಅಭಿಪ್ರಾಯಪಟ್ಟಿರುತ್ತಾರೆ.

**ಅಭಿಧಾನಮ್ :-** ವಸ್ತುವನ್ನು ಹೇಳುವ ಶಬ್ದ. ಇದನ್ನು ವಾಚಕವೆಂದೂ ಕರೆಯುವರು. ಬ್ರಹ್ಮವು ಯಾವ ಅಭಿಧಾನದಿಂದಲೂ ಹೇಳಲ್ಪಡುವ ವಸ್ತುವಲ್ಲ, ಅಭಿಧೇಯವಲ್ಲ. ಆದರ ಸ್ವರೂಪವು ಅಭಿಧಾನ, ಅಭಿಧೇಯ- ಈ ಎರಡಕ್ಕಿಂತಲೂ ಬೇರೆಯಾಗಿದೆ. ನಾಮ, ಜಾತಿ- ಮುಂತಾದ ವಿಕಲ್ಪಗಳಿರುವ ವಸ್ತು ಮಾತ್ರ ಅಭಿಧಾನಕ್ಕೆ ವಿಷಯವಾಗಿ ಅಭಿಧೇಯವಾಗಿರುವದು. ಮಾಂ. ಭಾ.೧; ಮಾಂ. ಭಾ.ಭಾ.೩೫; ತೈ.ಭಾ ೨-೯ ಭಾ.ಭಾ. ೨೨೦.

**ಅರ್ಥವಾದಃ :-** ಮುಖ್ಯೋಪದೇಶವನ್ನು ಹೊಗಳುವ, ಅಥವಾ ಅದಕ್ಕೆ ವಿಪರೀತವಾದದ್ದನ್ನು ನಿಂದಿಸುವ ವಾಕ್ಯ. ಕರ್ಮವನ್ನು ವಿಧಿಸುವದೇ ಶಾಸ್ತ್ರದ ಮುಖ್ಯೋದ್ದೇಶವೆಂದು ಪೂರ್ವಮೀಮಾಂಸಕರೆನ್ನುತ್ತಿದ್ದರು. ಅವರ ಅಭಿಪ್ರಾಯದಲ್ಲಿ

ಉಪನಿಷತ್ತುಗಳು ಕೂಡ ಕರ್ಮಕ್ಕೆ ಬೇಕಾದ ಕರ್ತೃವನ್ನು ಅಥವಾ ದೇವತೆಯನ್ನು ತಿಳಿಸುವದರಿಂದ ಪ್ರಮಾದವಾಗಬಹುದು; ಅಥವಾ ವಿಧಿಯನ್ನು ಹೊಗಳುವ ಅರ್ಥವಾದವಾಗಬೇಕು. ಆದರೆ ಉಪನಿಷತ್ತುಗಳಲ್ಲಿರುವ ವಾಕ್ಯಗಳು ತಾತ್ಪರ್ಯದಿಂದ ಬ್ರಹ್ಮವನ್ನೇ ಹೇಳುತ್ತವೆ; ಮುಖ್ಯವಾದ ವಾಕ್ಯಗಳಲ್ಲಿರುವ ಪದಗಳು ಬ್ರಹ್ಮಸ್ವರೂಪವನ್ನು ತಿಳಿಸುವ ಸಮನ್ವಯವುಳ್ಳವಾಗಿರುವದರಿಂದ ಉಪನಿಷತ್ತುಗಳು ನೇರಾಗಿ ಬ್ರಹ್ಮವನ್ನು ತಿಳಿಸುವ ಪ್ರಮಾಣಗಳಾಗಿವೆ-ಎಂದು ಆಚಾರ್ಯರು ಪ್ರತಿಪಾದಿಸಿರುತ್ತಾರೆ. ಸೂ. ಭಾ. ೧-೧-೪, ಬೃ.ಭಾ.೧-೪-೧೦ ಐ.ಭಾ. ಸಂಬಂಧಗ್ರಂಥ.

ಅರ್ಥವಾದಗಳಲ್ಲಿರುವ ಅಭಿಪ್ರಾಯವು ಪ್ರಮಾಣಾಂತರಕ್ಕೆ ವಿಷಯವಾಗಿದ್ದರೆ ಅದು ಅನುವಾದವು, ಎಂದರೆ ತಿಳಿದದ್ದನ್ನೇ ತಿಳಿಸತಕ್ಕದ್ದಾದ್ದರಿಂದ ಅದು ಪ್ರಮಾಣವಲ್ಲ. ಎಲ್ಲಿ ಪ್ರಮಾಣಾಂತರಕ್ಕೆ ವಿರುದ್ಧವಾಗಿರುತ್ತದೆಯೋ ಅಲ್ಲಿ ಗುಣವಾದವು, ಎಂದರೆ ಆಯಾ ಗುಣವನ್ನು ಮಾತ್ರ ತಿಳಿಸುವದು. ಆದರೆ ಎಲ್ಲಿ ಈ ಎರಡು ಪ್ರಕಾರಗಳೂ ಹೊಂದುವದಿಲ್ಲವೋ ಅಲ್ಲಿ ಭೂತಾರ್ಥವಾದವೇ, ಎಂದರೆ ಇದ್ದದ್ದನ್ನೇ ತಿಳಿಸುವದು-ಎಂದು ಇಟ್ಟುಕೊಳ್ಳಬೇಕು ಎಂಬುದು ಆಚಾರ್ಯರ ಮತವು. ಸೂ.ಭಾ. ೧-೩-೩೩.

**ಅವಸ್ಥಾ :-** ಜಾಗರಿತ, ಜಾಗ್ರತ್ (ಎಚ್ಚರ); ಸ್ವಪ್ನ (ಕನಸು), ಸುಷುಪ್ತಿ, ಸುಷುಪ್ತ (ತನಿನಿದ್ರೆ) ಎಂಬ ಮೂರೂ ಜೀವನ ಅವಸ್ಥೆಗಳು. ಈ ಮೂರು ಅವಸ್ಥೆಗಳಲ್ಲಿಯೇ ವಾದಿಗಳು ಕಲ್ಪಿಸಿರುವ ವಸ್ತುಗಳೆಲ್ಲ ಅಡಕವಾಗಿರುವವು; ಇವುಗಳ ತತ್ತ್ವವನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತುಕೊಂಡಂತೆ. ಮಾಂ. ಕಾ.ಭಾ. ೪-೮೮. ಅವಸ್ಥೆಗಳಲ್ಲಿ ಕಾಣುವ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ದೃಷ್ಯಗಳೆಲ್ಲವೂ ಆಯಾ ಅವಸ್ಥೆಗೇ ಸೇರಿದ್ದು ಎಂದು ತಿಳಿಯಬೇಕು. ಮಾಂ. ಕಾ. ಭಾ.೩.

**ಅವಾಕ್ಯಾರ್ಥಃ, ಅವಾಚ್ಯಾರ್ಥಃ :-** ಬ್ರಹ್ಮದಲ್ಲಿ ಶಬ್ದಪ್ರವೃತ್ತಿಗೆ ನಿಮಿತ್ತವಾದ ಜಾತಿ, ದ್ರವ್ಯ- ಮುಂತಾದ ವಿಕಲ್ಪಗಳಿಲ್ಲದ್ದರಿಂದ ಅದು ಯಾವ ಶಬ್ದಕ್ಕೂ ವಾಚ್ಯವಲ್ಲ. ಪದಾರ್ಥಗಳ ಸಂಸರ್ಗವನ್ನೇ ವಾಕ್ಯವು ತಿಳಿಸುವದರಿಂದ ಯಾವದರ ಸಂಬಂಧವೂ ಇಲ್ಲದ ಬ್ರಹ್ಮವು ವಾಕ್ಯಾರ್ಥವೂ ಅಲ್ಲ. ತೈ. ಭಾ. ೨-೧. 'ಅಭಿಧಾನಮ್' ಎಂಬ ಶಬ್ದದ ವಿವರವನ್ನು ನೋಡಿ.

**ಅವಿದ್ಯಾ :-** ಆತ್ಮಾನಾತ್ಮರ ಅನ್ಯೋನ್ಯಾಧ್ಯಾಸವೇ ಅವಿದ್ಯೆ. ಈ ಅಧ್ಯಾಸವು ಕಾರ್ಯಾವಿದ್ಯೆಯೆಂದೂ ಇದಕ್ಕೆ ಕಾರಣವಾಗಿ ಮೂಲಾವಿದ್ಯೆ, ಮಾಯೆ- ಎಂಬ ಹೆಸರಿನ ಅವಿದ್ಯೆಯೊಂದು ಇರುವದೆಂದೂ ವ್ಯಾಖ್ಯಾನಕಾರರು ಬರೆದಿರುತ್ತಾರೆ. ಪ್ರಸ್ತಾನತ್ರಯಭಾಷ್ಯದಲ್ಲಿ ಈ ವಾದಕ್ಕೆ ಆಧಾರವು ಸಿಕ್ಕುವದಿಲ್ಲ.

**ಅವಿದ್ಯಾಕಲ್ಪಿತ :-** ಅವಿದ್ಯೆಯಿಂದ ತೋರುವ; ಭ್ರಾಂತಿನಿಮಿತ್ತವಾದ ಹುಸಿ ತೋರಿಕೆ. ಅವಿದ್ಯಾಕಲ್ಪಿತ, ಅವಿದ್ಯಾಕೃತ, ಅವಿದ್ಯಾತ್ಮಕ, ಅವಿದ್ಯಾನಿಮಿತ್ತ , ಅವಿದ್ಯಾಪ್ರತ್ಯುಪಸ್ಥಾಪಿತ, ಅವಿದ್ಯಾಧ್ಯಾರೋಪಿತ, ಅವಿದ್ಯಾಧ್ಯಸ್ತ , ಅವಿದ್ಯಾಲಕ್ಷಣ- ಈ ಎಲ್ಲಾ ಮಾತುಗಳಿಗೂ ಒಂದೇ ಅರ್ಥ. ಸೂತ್ರಭಾಷ್ಯದಲ್ಲಿ ಈ ಮುಂದೆ ಹೇಳುವದೆಲ್ಲವೂ ಅವಿದ್ಯಾಕಲ್ಪಿತವೆಂದು ತಿಳಿಸಿದೆ; ಉಪಾಸ್ಯೋಪಾಸಕ ಭಾವ ೧-೧-೧೨; ಆತ್ಮಬುದ್ಧಿ ಸಂಬಂಧ ೨-೩-೩೧; ಕರ್ತೃತ್ವಭೋಕ್ತೃತ್ವಗಳು ೨-೩.೪೦; ಸಂಸಾರಿತ್ವ, ಜೀವತ್ವ, ಶಾರೀರತ್ವ ೧-೧-೪, ೧-೧-೧೭, ೧-೩-೧೯, ೨-೩-೪೬, ೨-೩-೫೦; ಕಾರ್ಯಕರಣಗಳು ೧-೧-೨೦; ತಪ್ಯತಾಪಕಭಾವ ೨-೨-೧೦; ನಾಮರೂಪಬೀಜ, ನಾಮರೂಪಮಾಯಾ ೧-೪-೩, ೨-೧-೧೪, ೨-೨-೨ ೪-೩-೧೪; ಜೀವಪ್ರಾಜ್ಞಭೇದ ೧-೪-೬; ನಾಮರೂಪರಚಿತದೇಹಾದ್ಯುಪಾಧಿಗಳು ೧-೪-೨೨, ೨-೩-೪೬; ಪ್ರಾಣಾದಿಕಲೆಗಳು ೪-೨-೧೬; ಬ್ರಹ್ಮದ ಉಪಾಧಿಗಳು ೨-೩-೧೫; ಬ್ರಹ್ಮದ ಕಾರ್ಯವಾದ ಪ್ರಪಂಚವೂ ಅದರ ಧರ್ಮಗಳೂ ೨-೧-೯; ಭೂತೇಂದ್ರಿಯಗಳು ೧-೪.೨೨; ವ್ಯಾಕೃತಾವ್ಯಾಕೃತನಾಮರೂಪಗಳು ೨-೧-೨೭.

**ಅವ್ಯಕ್ತಃ :-** ಇಂದ್ರಿಯಗಳಿಗೆ ಗೋಚರನಲ್ಲದ ಆತ್ಮ ಗೀ.ಭಾ.೮-೨೦.

**ಅವ್ಯಕ್ತಮ್ :-** ನಾಮರಾಪಾತ್ಮಕವಾದ ಜಗತ್ತಿನ ಬೀಜವಾದ ಅವ್ಯಾಕೃತ ಅಥವಾ ಮಾಯೆ. ಇದು ಸಾಂಖ್ಯರು ಕಲ್ಪಿಸಿರುವ ಪ್ರಧಾನದಂತೆ ಸ್ವತಂತ್ರವಾಗಿ ಪರಿಣಾಮವಾಗುವದಲ್ಲ; ಅವಿದ್ಯೆಯಿಂದ ಆತ್ಮನಲ್ಲಿ ಶಕ್ತಿಯೆಂದು ಕಲ್ಪಿತವಾಗಿರುವದು. ಸೂ.ಭಾ. ೧-೪-೩, ೧-೪-೯, ೨-೧-೧೪.

**ಅವ್ಯಾಕೃತಮ್ :-** ಜಗತ್ತಿನ ಬೀಜರೂಪ. ಇದು ಅವಿದ್ಯೆಯಿಂದ ಆತ್ಮನಲ್ಲಿ ಕಲ್ಪಿತವಾಗಿರುತ್ತದೆ. ಆತ್ಮನಿಗಿಂತ ಬೇರೆಯೆಂದಾಗಲಿ ಬೇರೆಯಲ್ಲವೆಂದಾಗಲಿ ಹೇಳಬರುವದಲ್ಲ. ಇದರ ಪರಿಣಾಮದಿಂದಲೇ ಬ್ರಹ್ಮಕ್ಕೆ ಪರಿಣಮಿಸುವದೆಂಬ ವ್ಯವಹಾರ ಸೂ.ಭಾ.೨-೧-೨೭ ಇದನ್ನು ಮೂಲಾವಿದ್ಯೆಯೆಂದು ಕರೆದು ಇದೇ ಆತ್ಮಾನಾತ್ಮರ ಅಧ್ಯಾಸಕ್ಕೆ ಕಾರಣವೆಂದು ವ್ಯಾಖ್ಯಾನಕಾರರು ಬರೆದಿರುತ್ತಾರೆ; ಈ ವಾದಕ್ಕೆ ಭಾಷ್ಯದಲ್ಲಿ ಆಧಾರವಿಲ್ಲ.

**ಅಸತ್, ಅಸತ್ಯಮ್ :-** ೧. ಯಾವದರ ವಿಷಯವಾದ ಬುದ್ಧಿಯು ಬಾಧಿತವಾಗುವದೋ ಅದು, ಹುಸಿತೋರಿಕೆ. ಇದನ್ನು ಅನೃತ, ಮಿಥ್ಯೆ , ಮೃಷಾ ಎಂದೂ ಕರೆಯುವರು. ಕಾರ್ಯಪ್ರಪಂಚವೆಲ್ಲವೂ ಅಸತ್ತು . ಗೀ. ಭಾ. ೨-೧೬, ತೈ .ಭಾ.೨-೧.

೨. ಕಾರಣವಾದ ಅವ್ಯಾಕೃತವು. ನಾಮರೂಪಗಳಿಂದ ಕೂಡಿ ಇಂಥದ್ದೆಂದು

ಹೇಳುವುದಕ್ಕೆ ಬರುವ ವಸ್ತು ಸತ್ತು, ಅದಕ್ಕೆ ವಿಪರೀತವಾದದ್ದರಿಂದ ಅವ್ಯಾಕೃತವು ಅಸತ್ತು. ತೈ.೨-೭, ಗೀ. ಭಾ. ೯-೧೯.

**ಅಹಂಕಾರ :-** ೧. ದೇಹಾದಿಗಳು ನಾನೆಂಬ ಅರಿವು. ನಾನು ಕರ್ತನೆಂಬ ಭಾವನೆಯು ಕರ್ಮಕ್ಕೆ ಕಾರಣ. ಗೀ. ಭಾ. ೧೩-೩, ೧೮-೧೭. ತತ್ತ್ವಜ್ಞಾನಿಗೆ ಸಾತ್ತ್ವಿಕವಾದ ಅಹಂಕಾರವು ಕೂಡ ಇರುವದಿಲ್ಲ. ಗೀ.ಭಾ.೧೩-೫೩, ೧೮-೨೪.

೨. ಮನಸ್ಸಿಗೆ ಕಾರಣವಾದ, ಮಹಾಭೂತಗಳಿಗೆ ಕಾರಣವಾದ ಅಹಂಕಾರವೆಂಬ ತತ್ತ್ವ. ಗೀ.ಭಾ.೭-೪, ೭-೫.

**ಅಹಂಪ್ರತ್ಯಯವಿಷಯಃ, ಅಹಂಪ್ರತ್ಯಯೀ :-** ನಾನೆಂಬ ಪ್ರತ್ಯಯಕ್ಕೆ ಆಶ್ರಯವೂ ವಿಷಯವೂ ಆಗಿರುವ ಜೀವಾತ್ಮ. ಅಹಂಪ್ರತ್ಯಯಕ್ಕೆ ವಿಷಯನಾಗಿಯೇ ಆತ್ಮನು ಮಾನಸಪ್ರತ್ಯಕ್ಷಕ್ಕೆ ಗೋಚರವಾಗಿರುತ್ತಾನೆಂದು ಮೀಮಾಂಸಕರೂ ನೈಯಾಯಿಕರೂ ಒಪ್ಪುತ್ತಿದ್ದರು. ಅವನಿಗೂ ಸಾಕ್ಷಿಯಾಗಿರುವ ಆತ್ಮನೇ ವೇದಾಂತವೇದ್ಯನೆಂದು ಆಚಾರ್ಯರು ಅಧ್ಯಾಸಭಾಷ್ಯ, ಬೃಹದಾರಣ್ಯಕ ಸಂಬಂಧ ಭಾಷ್ಯ, ಸೂ.ಭಾ. ೧-೧-೪ ಮುಂತಾದ ಕಡೆಗಳಲ್ಲಿ ತಿಳಿಸಿಕೊಟ್ಟಿರುತ್ತಾರೆ. ಗೀ. ಭಾ. ೨-೧೯ರಲ್ಲಿ ಆತ್ಮನು ಅಹಂಪ್ರತ್ಯಯವಿಷಯನು ಎಂದು ತಿಳಿಯುವದೇ ಅಜ್ಞಾನವೆಂದು ಹೇಳಿದೆ.

## ಆ

**ಆಕಾಶಃ :-** ೧. ಶಬ್ದವೆಂಬ ಗುಣವುಳ್ಳ ಮಹಾಭೂತವು. ಆಕಾಶಕ್ಕೂ ವಾಯ್ವಾದಿಗಳಂತೆ ಉತ್ಪತ್ತಿಯುಂಟು ಎಂಬುದನ್ನು ಸೂ.ಭಾ. ೨-೩-೭ರಲ್ಲಿ ತೋರಿಸಿರುತ್ತದೆ.

**ಆಕಾಶಃ—೨ :-** ತನ್ನ ಕಾರ್ಯವೆಲ್ಲವನ್ನೂ ವ್ಯಾಪಿಸಿಕೊಂಡಿರುವ ಅವ್ಯಾಕೃತ. ಬೃ.ಭಾ. ૩-೮-೪.

**ಆಕಾಶಃ —೩ :-** ಸರ್ವಭೂತಗಳಿಗೂ ಕಾರಣನಾಗಿರುವ ಪರಮಾತ್ಮ ಛಾಂ. ಭಾ. ೧-೯-೧.

**ಆಗಮಃ —೧ :-** ಗುರುವಿನಿಂದ ಶಿಷ್ಯನಿಗೆ ಸಂಪ್ರದಾಯದಿಂದ ಬರುವ ಉಪದೇಶ ಕೇ. ಭಾ. ೧-೪-೨. ಶಾಸ್ತ್ರಪ್ರಮಾಣ.

**ಆಚಾರ್ಯಃ :-** ಅನುಭವಿಯಾದ ಗುರು. ಶಾಸ್ತ್ರಾಚಾರ್ಯರಿಂದ ಆದ ಉಪದೇಶವು ಜ್ಞಾನಕ್ಕೆ ಕಾರಣವಾಗುವದೆಂದೂ ಆ ಜ್ಞಾನಕ್ಕೆ ತನ್ನ ಅನುಭವವೂ ಹೊಂದುಗಡೆಯಾಗಬೇಕೆಂದೂ ಭಾಷ್ಯಕಾರರು ಹಲವು ಕಡೆಗಳಲ್ಲಿ ಬರೆದಿರುತ್ತಾರೆ.

**ಆತ್ಮಗುಣಾಃ** :- ಆತ್ಮಜ್ಞಾನವುಂಟಾಗುವದಕ್ಕೆ ಅವಶ್ಯವಾಗಿರುವ ಸತ್ಯ, ಆರ್ಜವ, ದಾನ, ದಯೆ, ಅಹಿಂಸೆ- ಮುಂತಾದ ಗುಣಗಳು. ಐ.ಭಾ. ಭಾ. ೩೬.

**ಆತ್ಮಾ —೧** :- ಒಳಗಿನ ಸ್ವರೂಪ, ತಾನು. ೨. ಸರ್ವಸಂಸಾರಧರ್ಮ ವರ್ಜಿತನಾದ ಪರಮಾತ್ಮ. ಐ. ಭಾ. ಭಾ. ೨೮, ಕ.ಭಾ. ೨-೧-೧.

**ಆತ್ಮಪ್ರತ್ಯಯಃ** :- ತಾನೆಂಬ ಅರಿವು; ತುರೀಯನನ್ನು ತಿಳಿಯುವದಕ್ಕೆ ಬೇಕಾದ ಪ್ರಮಾಣಭೂತವಾದ ತಿಳಿವಳಿಕೆ ಮಾಂ. ಭಾ. ೭.

**ಆತ್ಮಪ್ರತ್ಯಯಿಕಂ ಜ್ಞಾನಮ್** :- ತನ್ನ ಅನುಭವಕ್ಕೆ ಬರುವ ಆತ್ಮಜ್ಞಾನ ಗೀ. ಭಾ. ೧೩-೩೪.

**ಆತ್ಮಭಾವಃ, ಆತ್ಮಾಭಿಮಾನಃ** :- ತಾನೆಂಬ ಭಾವನೆ, ಉಪಾಸನೆಯಿಂದಾದ ಸಾಕ್ಷಾತ್ಕಾರ. ಕ. ಭಾ. ೧-೧-೧೭. ಬೃ. ಭಾ. ೧-೩-೯.

**ಆತ್ಮವಿವೇಕಜ್ಞಾನಮ್, ಆತ್ಮವಿವೇಕಪ್ರಜ್ಞಾ**:- ಆತ್ಮಸ್ವರೂಪವನ್ನು ಅನಾತ್ಮದಿಂದ ವಿಂಗಡಿಸಿ ಅರಿತುಕೊಳ್ಳುವದು. ಗೀ. ಭಾ. ೨-೫೩, ೩-೩. ಆತ್ಮನನ್ನೂ ಅನಾತ್ಮವನ್ನೂ ವಿಂಗಡಿಸಿ ತಿಳಿದುಕೊಳ್ಳುವುದು- ಉದಾಹರಣೆಗೆ ದೇಹಾದಿಗಳು ಆತ್ಮನಲ್ಲವೆಂದು ತಿಳಿಯುವದು- 'ಆತ್ಮಾನಾತ್ಮವಿವೇಕ' ಎಂದು ಈಗಿನ ವೇದಾಂತಿಗಳು ಹೇಳುವರು. ಆದರೆ ಆತ್ಮಸ್ವರೂಪವೊಂದೇ ಸತ್ಯವೆಂದು ಗೊತ್ತುಪಡಿಸಿಕೊಳ್ಳುವದು ಎಂಬರ್ಥವಲ್ಲದೆ ಬೇರೆ ಅರ್ಥದಲ್ಲಿ ಈ ಶಬ್ದಕ್ಕೆ ಭಾಷ್ಯದಲ್ಲಿ ಪ್ರಯೋಗವು ಕಂಡುಬರುವದಿಲ್ಲ.

**ಆತ್ಮಜ್ಞಾನಮ್, ಆತ್ಮವಿಜ್ಞಾನಮ್, ಆತ್ಮವಿದ್ಯಾ** :- ಆತ್ಮಸ್ವರೂಪವನ್ನು ಇದ್ದಂತೆ ಅರಿತುಕೊಳ್ಳುವದು. ಇದಕ್ಕೆ ಶಾಸ್ತ್ರಾಚಾರ್ಯರ ಉಪದೇಶವೂ ಶಮದಮಾದಿಗಳಿಂದಾದ ಸಂಸ್ಕಾರವೂ ಬೇಕು.

**ಆತ್ಮೈಕತ್ವಜ್ಞಾನಮ್, ಆತ್ಮೈಕತ್ವವಿದ್ಯಾ** :- ಆತ್ಮನು ತನಗೆರಡನೆಯದಿಲ್ಲದ ಒಬ್ಬನೇ ಎಂಬ ಜ್ಞಾನ. ಸಂಸಾರಕ್ಕೆ ಕಾರಣವಾಗಿರುವ ಅಜ್ಞಾನವನ್ನು ಕಳೆಯುವದಕ್ಕೆ ಇದೊಂದೇ ಕಾರಣ; ಇದನ್ನು ತಿಳಿಸುವದಕ್ಕಾಗಿಯೇ ಉಪನಿಷತ್ತುಗಳೆಲ್ಲವೂ ಹೊರಟಿರುತ್ತವೆ.

**ಆತ್ಮೇಶ್ವರೈಕತ್ವಜ್ಞಾನಮ್** :- ಪರಮೇಶ್ವರನು ನಮ್ಮೆಲ್ಲರ ಆತ್ಮನೇ; ಆತ್ಮನಿಗೂ ಈಶ್ವರನಿಗೂ ಭೇದವಿಲ್ಲ ಎಂಬ ಜ್ಞಾನ. ಗೀ.ಭಾ.೪-೪೧.

**ಆತ್ಮಸ್ವರೂಪಾವಸ್ಥಾನಮ್** :- ತನ್ನ ಸ್ವರೂಪವೇ ಆಗಿರುವ ಪರಮಾತ್ಮನಲ್ಲಿ ಜ್ಞಾನದಿಂದ ನೆಲೆನಿಲ್ಲುವದು. ಗೀ.ಭಾ.೧೮-೧೦ ಇದನ್ನು ಸ್ವಾತ್ಮನ್ಯೇವಾವಸ್ಥಾನಮ್

(ತೈ.ಭಾ.) ಸ್ವಾತ್ಮಪ್ರತಿಷ್ಠಾ (ಮುಂ.ಭಾ.ಭಾ.೧-೧-೧) ಸ್ವರೂಪಾವಸ್ಥಾನಮ್ (ಗೀ.ಭಾ. ೧೮-೬೬, ಭಾ.ಭಾ. ೫೮೬) ಎಂದೂ ಕರೆಯುತ್ತಾರೆ.

**ಆತ್ಯನ್ತಿಕಸಂಸಾರೋಪರಮಃ :-** ಮತ್ತೆ ತೋರಿಕೊಳ್ಳದಂತೆ ಸಂಸಾರವು ನಾಶವಾಗುವದು; ಜ್ಞಾನದಿಂದ ಮಾತ್ರವೇ ಇದು ಸಾಧ್ಯ.

**ಆನನ್ದಃ :-** ಇಷ್ಟಲಾಭನಿಮಿತ್ತದಿಂದಾಗುವ ಹರ್ಷವೇ ಮುಂತಾದವುಗಳಲ್ಲಿ ಅನುಗತವಾಗಿರುವ ಸುಖಸಾಮಾನ್ಯ ; ಇದೇ ಆತ್ಮನ ಸ್ವರೂಪವು. ಪುಣ್ಯವಶದಿಂದ ಇಷ್ಟ ವಿಷಯಗಳ ಲಾಭದಿಂದ ಅಂತಃಕರಣವು ಪ್ರಸನ್ನವಾಗಿರುವಾಗ ಅಭಿವ್ಯಕ್ತವಾಗಿ ವಿಷಯಾನಂದವೆನಿಸುತ್ತದೆ. ತೈ.ಭಾ.೨-೫. ಆತ್ಮನ ಸ್ವರೂಪವಾಗಿರುವ ಆನಂದವು ವಿಷಯಾನಂದದಂತೆ ವಿಷಯೀಕರಿಸಿ ಅನುಭವಿಸುವ ಆನಂದವಲ್ಲ. ಬೃ.ಭಾ.೩-೯-೨೮.

**ಆರಂಭ :-** ಮಾಡುವದು, ಒಂದೇ ಜಾತಿಯ ಅನೇಕ ವಸ್ತುಗಳು ಸೇರಿ ಒಂದು ಕಾರ್ಯವನ್ನು ಮಾಡಿದರೆ ಅದಕ್ಕೆ ಆರಂಭವೆಂಬ ಹೆಸರೆಂದು ವೈಶೇಷಿಕರು ಹೇಳುತ್ತಾರೆ. ಈ ಆರಂಭವಾದವು ಆಚಾರ್ಯರಿಗೆ ಇಷ್ಟವಿಲ್ಲ **'ಆರಮ್ಭಕಮ್'** ಉಂಟುಮಾಡುವ ಕಾರಣ, **'ಆರಬ್ಧ'** ಉಂಟಾದ ಕಾರ್ಯ- ಎಂಬ ಮಾತುಗಳನ್ನು ಭಾಷ್ಯದಲ್ಲಿ ಆರಂಭವಾದದ ಹಂಗಿಲ್ಲದೆ ಉಪಯೋಗಿಸಿದೆ. ಗೀ.ಭಾ.೪-೧೪; ೧೩-೨೦

**ಆವರಣಮ್ :-** ಮುಸುಕು, ಅವಿದ್ಯೆ, ಧರ್ಮಾಧರ್ಮಗಳು, ಕಾಮ ಎಂಬ ಅಡ್ಡಿಯಿಂದ ಜೀವರ ಜ್ಞಾನವು ಹೊರತೋರಿಕೊಳ್ಳಲಾರದೆ ಇರುವದೆಂದು ಭಾಷ್ಯಕಾರರು ಅಲ್ಲಲ್ಲಿ (ಸೂ.ಭಾ.೧-೧-೫, ಗೀ.ಭಾ. ೩-೩೯, ೪-೫) ಬರೆದಿರುತ್ತಾರೆ. ಈಶ್ವರನಿಗೆ ಈ ಅಡ್ಡಿಯಿಲ್ಲದ್ದರಿಂದ ಅವನು ನಿರಾವರಣಜ್ಞಾನನೆಂದೂ ಬರೆದಿರುತ್ತಾರೆ. ಈ ಅಡ್ಡಿಗಿಂತ ಬೇರೆಯಾದ ಮೂಲಾವಿದ್ಯೆಯ ಆವರಣಶಕ್ತಿಯೊಂದು ಇದೆ ಎಂಬ ವ್ಯಾಖ್ಯಾನಕಾರರ ಅಭಿಪ್ರಾಯಕ್ಕೆ ಭಾಷ್ಯದಲ್ಲಿ ಆಧಾರವು ದೊರಕುವದಿಲ್ಲ.

**ಆವೃತ್ತಿಃ :-** ೧. ಕರ್ಮವನ್ನು ಮಾಡಿದವರು ಚಂದ್ರಲೋಕಕ್ಕೆ ಹೋಗಿ ಕರ್ಮದ ಫಲವು ಕ್ಷಯವಾಗಲು ಹಿಂತಿರುಗುವರು; ಈ ಆವೃತ್ತಿಯು ದೇವಯಾನವೆಂಬ ಮಾರ್ಗದಿಂದ ಹೋದವರಿಗೆ ಆಗುವದಿಲ್ಲ. (ಸೂ.ಭಾ.೪-೪-೨).

**ಆವೃತ್ತಿಃ :-** ೨. ಮತ್ತೆ ಮತ್ತೆ ಅಭ್ಯಾಸ ಮಾಡುವದು. ಶ್ರವಣವೇ ಮುಂತಾದವುಗಳನ್ನು ಆತ್ಮದರ್ಶನವಾಗುವವರೆಗೂ ಮತ್ತೆ ಮತ್ತೆ ಆವೃತ್ತಿಮಾಡಬೇಕು; ಏಕೆಂದರೆ ದರ್ಶನಕ್ಕಾಗಿಯೇ ಅವುಗಳನ್ನು ವಿಧಿಸಿದೆ. (ಸೂ. ಭಾ. ೪-೧-೧). ಆದರೆ ಒಂದು ಸಲ ಶ್ರವಣಮಾಡಿದ್ದರಿಂದಲೇ ಯಾವನಿಗೆ ಜ್ಞಾನವುಂಟಾಗುವದೋ, ಅವನಿಗೆ ಈ ಆವೃತ್ತಿಯು ಅವಶ್ಯವಿಲ್ಲ (ಸೂ. ಭಾ. ೪-೧-೧). ಜ್ಞಾನವನ್ನು ಮತ್ತೆ ಮತ್ತೆ

ಅಭ್ಯಾಸಮಾಡಿದ ಮೇಲೆಯೇ ವಿಶೇಷಾನುಭವರೂಪವಾದ ಸಾಕ್ಷಾತ್ಕಾರವುಂಟಾಗು ವದೆಂಬ ಮತವನ್ನು ಅಲ್ಲಲ್ಲಿ ಆಚಾರ್ಯರು ಖಂಡಿಸಿರುತ್ತಾರೆ. (ಸೂ.ಭಾ. ೪-೧-೧, ಬೃ.ಭಾ.೧-೪-೭).

## ಇ

**ಇನ್ದ್ರಿಯಾಣಿ :-** ಶಬ್ದಾದಿಗಳನ್ನು ಅರಿಯುವ ಬುದ್ಧೀಂದ್ರಿಯಗಳು ಐದು, ವಚನಾದಿಗಳನ್ನು ಮಾಡುವ ಕರ್ಮೇಂದ್ರಿಯಗಳು ಐದು, ಮನಸ್ಸು ಒಂದು - ಹೀಗೆ ಹನ್ನೊಂದು ಕರಣಗಳು. (ಸೂ. ಭಾ. ೨-೪-೬, ೧೭)

## ಈ

**ಈಶ್ವರಃ :-** ಜಗತ್ಕಾರಣವಾಗಿರುವ ಪರಬ್ರಹ್ಮ, ಪರಮಾತ್ಮ, ಮಾಯಾ ವಿಶಿಷ್ಟವಾದ ಚೈತನ್ಯವು, ಅಥವಾ ಮಾಯಾಪ್ರತಿಬಿಂಬಿತಚೈತನ್ಯವು, ಅಥವಾ ಸಮಷ್ಟಿಕಾರಣಶರೀರೋಪಹಿತವಾದ ಚೈತನ್ಯವು ಈಶ್ವರನು ಎಂಬ ಈಚಿನ ವ್ಯಾಖ್ಯಾನಕಾರರ ಮತವು ಭಾಷ್ಯದಲ್ಲಿಲ್ಲ.

**ಈಶ್ವರಕಾರಣಿನಃ :-** ಸರ್ವಜ್ಞನಾದ ಜೀವಭಿನ್ನನಾದ ಈಶ್ವರನು ಜಗತ್ತಿಗೆ ನಿಮಿತ್ತಕಾರಣಮಾತ್ರವೆಂದು ಅನುಮಾನದಿಂದ ಸಾಧಿಸುವ ತಾರ್ಕಿಕರು. (ಸೂ. ಭಾ. ೧-೧-೨)

## ಉ

**ಉತ್ತರಾಯಣಮ್ :-** ೧. ಉತ್ತರದ ಕಡೆಗೆ ಸೂರ್ಯನು ತಿರುಗುವ ಅಯನ; ಆಗ ಕರ್ಮ ಮತ್ತು ಉಪಾಸನೆಗಳ ಸಮುಚ್ಚಯವನ್ನು ಅನುಷ್ಠಾನ ಮಾಡಿದವರಿಗೆ ಫಲವನ್ನು ಸೂರ್ಯನು ಕೊಡುತ್ತಾನೆ. ಪ್ರ. ಭಾ. ೧-೯.

**ಉತ್ತರಾಯಣಮ್ :-** ೨. ದೇವಯಾನವೆಂಬ ಮಾರ್ಗದಲ್ಲಿ ಉಪಾಸಕನಿಗೆ ದೊರಕುವ ದೇವತೆ, ಗೀ. ಭಾ. ೮-೨೩, ಸೂ. ಭಾ. ೪-೨-೨೧.

**ಉತ್ತರಃ ಪನ್ಥಾಃ, ಉತ್ತರೋ ಮಾರ್ಗ :-** ಉಪಾಸಕರು ಬ್ರಹ್ಮಲೋಕಕ್ಕೆ ಹೋಗುವ ಮಾರ್ಗ. ಛಾಂ. ಭಾ. ೫-೧-೮೨, ಗೀ. ಭಾ. ೮-೨೩.

**ಉತ್ಪತ್ತಿಃ :-** ೧. ಸೃಷ್ಟಿ. ಸೃಷ್ಟಿಯನ್ನು ಹೇಳುವ ಶ್ರುತಿಯು ಏಕತ್ವವನ್ನು ತಿಳಿಸುವಕ್ಕೆ ಸಾಧನವೇ, ಸೃಷ್ಟಿಯು ಪರಮಾರ್ಥವೆನ್ನುವದಕ್ಕೆ ಬಂದಿಲ್ಲ. ಮಾಂ. ಕಾ. ಭಾ. ೨-೩೨, ೩-೧೪; ಸೂ. ಭಾ. ೪-೩-೧೪.

**ಉತ್ಪತ್ತಿಃ :-** ೨. ಕರ್ಮದ ಕಾರ್ಯದ ನಾಲ್ಕು ರೂಪಗಳಲ್ಲಿ ಒಂದು. ತೈ. ಭಾ. ೧-೧೧, ಮುಂ. ಭಾ. ೨-೧-೧೨, ಬೃ.ಭಾ. ೩-೩-೧. ಮುಕ್ತಿಯು ಉತ್ಪಾದ್ಯವೇ ಮುಂತಾದ ನಾಲ್ಕು ರೂಪಗಳಿಲ್ಲದ್ದಾದ್ದರಿಂದ ಅದು ಕರ್ಮಕಾರ್ಯವಲ್ಲ ಎಂದು ಮೇಲೆ ಹೇಳಿದ ಉಪನಿಷತ್ತುಗಳಲ್ಲಿಯೂ ಸೂ. ಭಾ. ೧-೧-೪ರಲ್ಲಿಯೂ ಭಾಷ್ಯಕಾರರು ಬರೆದಿರುತ್ತಾರೆ.

**ಉಪದೇಶ :-** ಶಾಸ್ತ್ರಾಚಾರ್ಯರ ಉಪದೇಶವು ಬ್ರಹ್ಮಾನುಭವಕ್ಕೆ ಕಾರಣವೆಂದು ಗೀ. ಭಾ. ೨-೨೧, ಕ.ಭಾ.೨-೧-೧೧, ಮುಂ. ಭಾ. ೨-೨-೭ ಮುಂತಾದ ಕಡೆಗಳಲ್ಲಿ ಭಾಷ್ಯಕಾರರು ಒತ್ತಿ ಹೇಳಿರುತ್ತಾರೆ.

**ಉಪನಿಷತ್ :-** ೧. ವಿರಾಟ್ಪುರುಷನನ್ನು ತಿಳಿಸುವ ಅಗ್ನಿವಿದ್ಯೆ . ಈ ಲೋಕದಲ್ಲಿ ಉಂಟಾಗುವ ಗರ್ಭವಾಸಜನ್ಮಜರಾದಿಗಳನ್ನು ನಾಶಮಾಡುವದರಿಂದ ಇದು 'ಉಪನಿಷತ್ತು' ಎನಿಸಿದೆ.

**ಉಪನಿಷತ್ :-** ೨. ಯಾರು ಇದರ ಬಳಿಗೆ ಬಂದು (ಉಪ), ನಿಶ್ಚಯದಿಂದ ಇದನ್ನು ಪರಿಶೀಲಿಸುವರೋ ಅವರ ಅವಿದ್ಯಾದಿಗಳನ್ನು ನಾಶಮಾಡುವದರಿಂದ ಇದು ಉಪನಿಷತ್ ಎನಿಸುವದು. ಕ.ಭಾ. ಮತ್ತು ಮುಂ. ಭಾ. ಗಳ ಅವತರಣಿಕೆಯನ್ನು ನೋಡಿ. ಈ ವಿದ್ಯೆಯನ್ನು ಹೇಳುವ ಗ್ರಂಥವನ್ನೂ ಉಪನಿಷತ್ತೆಂದು ಕರೆಯುವದು ಉಪಚಾರಕ್ಕೆ.

**ಉಪನಿಷತ್ :-** ೩. ಅಭಿಧಾಯಕವಾದ ಶಬ್ದವು. ಬೃ. ಭಾ. ೨-೧-೨೦.

**ಉಪಾದಾನಕಾರಣಮ್ :-** ಯಾವುದನ್ನು ತೆಗೆದುಕೊಂಡರೇ ಕಾರ್ಯವಾಗುವದೋ ಅದು; ಮಣ್ಣು, ಸುವರ್ಣ- ಮುಂತಾದವುಗಳು ಮಡಕೆ, ಒಡವೆಗಳು - ಇವುಗಳಿಗೆ ಉಪಾದಾನಕಾರಣವು. ಸೂ. ಭಾ. ೧-೪-೨೩, ೨-೧-೧, ಇಲ್ಲದಿರುವ ಮಡಕೆ, ಒಡವೆ-ಮುಂತಾದವು ಹೊಸದಾಗಿ ಹುಟ್ಟಿ ಕಾರಣದೊಡನೆ ಸಮವಾಯಸಂಬಂಧದಿಂದ ಸೇರಿಕೊಳ್ಳುವವೆಂದೂ ಮಣ್ಣು ಮುಂತಾದವು ಸಮವಾಯಿ ಕಾರಣಗಳೆಂದೂ ಹೇಳುವ ವೈಶೇಷಿಕರ ಮತವನ್ನು ಆಚಾರ್ಯರು ಖಂಡಿಸಿರುತ್ತಾರೆ! ಸೂ. ಭಾ. ೨-೧-೧೮; ಗೀ. ಭಾ. ೧೮-೪೮.

**ಉಪಾಧಿ :-** ಹತ್ತಿರವಿರುವದರಿಂದ ತನ್ನ ಸ್ವಭಾವವನ್ನು ಮತ್ತೊಂದರಲ್ಲಿ ತೋರಿಸುವ ಪದಾರ್ಥ. ಜೀವಾತ್ಮನಿಗೆ ದೇಹ, ಇಂದ್ರಿಯಗಳ ಪ್ರಾಣ, ಮನಸ್ಸು- ಇವು ಉಪಾಧಿಗಳು. ಸೂ. ಭಾ. ೧-೧-೫, ೧-೧-೧೭, ೧-೧-೩೧, ೧-೩-೧೯. ಈ ಉಪಾಧಿಗಳು ಅವಿದ್ಯೆಯಿಂದ ಕಲ್ಪಿತವಾಗಿರುತ್ತವೆ, ಪರಮಾರ್ಥವಲ್ಲ. ಸೂ. ಭಾ. ೩-೨-೧೫.

**ಉಪಾಧ್ಯುಪಶಮ :-** ಸುಷುಪ್ತಿ ಮುಂತಾದ ಅವಸ್ಥೆಗಳಲ್ಲಿ ಉಪಾಧಿಗಳು ಇಲ್ಲವಾಗುವದು. ಆಗ ಜೀವಾತ್ಮನಿಗೆ ಪರಮಾತ್ಮನೊಡನೆ ಸ್ವರೂಪಸಂಬಂಧ ವಾಗುವದು. ಸೂ.ಭಾ. ೩-೨-೮, ೩-೨-೩೪, ೩೫.

**ಉಪಾಸನಮ್, ಉಪಾಸನಾ :-** ಒಂದಾನೊಂದು ವಸ್ತುವನ್ನು ಶಾಸ್ತ್ರದಲ್ಲಿ ಹೇಳಿರುವಂತೆ, ಮತ್ತೊಂದು ವಸ್ತುವಿನ ಚಿಂತೆಯು ನಡುವೆ ಬರದಂತೆ, ಅದನ್ನೇ ಎಡೆಬಿಡದೆ ಚಿಂತಿಸುತ್ತಿರುವದು. ತೈ.ಭಾ. ೧-೩, ಸೂ.ಭಾ. ೪-೧-೧; ಗೀ. ಭಾ. ೧೨-೩. ಈ ಉಪಾಸನೆಯು ಭಾವನಾರೂಪವಾಗಿಯೂ ಜ್ಞಾನರೂಪವಾಗಿಯೂ ಇರಬಹುದು. ಗೀ. ಭಾ. ೧೨-೩, ಬೃ.ಭಾ.೧-೪-೭, ಭಾವನಾರೂಪವಾದ ಉಪಾಸನೆಗಳಿಗೆ ಪ್ರಾಣಾದಿಗಳೂ ಸಗುಣಬ್ರಹ್ಮವೂ ವಿಷಯವಾಗಿರುವವು. ಅವುಗಳಿಗೆ ದೃಷ್ಟಫಲವೂ ಅದೃಷ್ಟಫಲವೂ ಉಂಟು. ಕೆಲವಕ್ಕೆ ಜ್ಞಾನೋತ್ಪತ್ತಿ ಮೂಲಕವಾಗಿ ಮುಕ್ತಿಯು ಆಗುವದು. ಸೂ.ಭಾ.೩-೩-೧, ಗೀ.ಭಾ. ೮-೧೨, ಪ್ರ.ಭಾ. ೫-೧. ಉಪಾಸ್ಯೋಪಾಸಕವ್ಯವಹಾರವೆಲ್ಲ ಅವಿದ್ಯಾವಿಷಯವೇ. ಸೂ. ಭಾ. ೧-೧-೪.

## ಋ

**ಋಣತ್ರಯಮ್ :-** ದೇವಋಣ, ಋಷಿಋಣ, ಪಿತೃಋಣ - ಎಂಬ ಮೂರನ್ನು ತೀರಿಸಿದ ಬಳಿಕವೇ ಮೋಕ್ಷದಲ್ಲಿ ಮನಸ್ಸಿಡಬೇಕೆಂದು ಶ್ರುತಿಸ್ಮೃತಿಗಳಲ್ಲಿದೆ. ಇದು ಅವಿರಕ್ತರಾದ ಅಜ್ಞರ ವಿಷಯವೆಂಬ ಆಚಾರ್ಯರ ಅಭಿಪ್ರಾಯ. ಐ.ಭಾ. ೨೦, ಬೃ. ೧-೪-೧೦, ೪-೫-೧೫.

**ಋಷಿ :-** ಬಲ್ಲವನು, ತತ್ತ್ವವನ್ನು ಅರಿತಿರುವವನು. ಈ ಮಾತನ್ನು ವೇದ, ಕರ್ಮತತ್ತ್ವವನ್ನು ಬಲ್ಲವನು, ಉಪಾಸನಾತತ್ತ್ವವನ್ನು ಬಲ್ಲವನು, ಪರಮಾರ್ಥ ತತ್ತ್ವವನ್ನು ಬಲ್ಲವನು- ಎಂಬರ್ಥದಲ್ಲಿ ಆಚಾರ್ಯರು ಉಪಯೋಗಿಸಿರುತ್ತಾರೆ. ಐ.ಭಾ. ೨-೫, ಪ್ರ.ಭಾ. ೧-೯, ಮುಂ. ಭಾ. ೩-೬.

## ಏ

**ಏಕಮ್ :-** ಬೇರೆಯಲ್ಲದೆ ಎಲ್ಲೆಲ್ಲಿಯೂ ಒಂದೇ ಆಗಿರುವ, ತನಗೆರಡನೆಯ ದಿಲ್ಲದ. ಆತ್ಮನು ಏಕನು ಎಂದರೆ ಎಲ್ಲರಿಗೂ ಒಬ್ಬನೇ ಎಂದರ್ಥ; ಅಥವಾ ತನಗಿಂತ ಬೇರೆಯಾದ ಎರಡನೆಯದಿಲ್ಲವನು ಎಂದರ್ಥ. ಏಕವೆಂಬ ಮಾತನ್ನು ಸಂಖ್ಯಾವಾಚಕವಾಗಿ ಉಪಯೋಗಿಸಿಲ್ಲ. ಈ. ಭಾ. ೪, ಛಾಂ. ಭಾ. ೬-೨-೧.

## ಐ

**ಐಕಾಶ್ರಮ್ಯ :-** ಗಾರ್ಹಸ್ಥ್ಯವೆಂಬ ಒಂದು ಆಶ್ರಮವೇ ಶ್ರುತಿಗೆ ಇಷ್ಟವಾದದ್ದೆಂಬ ವಾದವನ್ನು ಆಚಾರ್ಯರು ಖಂಡಿಸಿರುತ್ತಾರೆ. ತೈ. ಭಾ. ೧-೧೧ ಉಪಸಂಹಾರ; ಬೃ. ಭಾ. ೪-೫-೧೫ ಉಪಸಂಹಾರ.

**ಐಶ್ವರ್ಯಮ್ :-** ಎಲ್ಲವನ್ನೂ ಆಳುವ ಸ್ವಾತಂತ್ರ್ಯ. ಐಶ್ವರ್ಯವು ಮನುಷ್ಯನಿಂದ ಹಿಡಿದು ಹಿರಣ್ಯಗರ್ಭನವರೆಗೆ ಹೆಚ್ಚುತ್ತಾ ಹೋಗಿರುತ್ತದೆ. ಹಿರಣ್ಯಗರ್ಭನಲ್ಲಿ ಎಲ್ಲರಿಗಿಂತಲೂ ಹೆಚ್ಚಾಗಿದೆ. ನಿತ್ಯೈಶ್ವರ್ಯವು ಪರಮಾತ್ಮನಲ್ಲಿ ಮಾತ್ರ ಸ್ವಾಭಾವಿಕವಾಗಿದೆ. ಸೂ. ಭಾ. ೧-೩-೩೦, ಮುಂ.ಭಾ. ೧-೧-೧, ಗೀ.ಭಾ. ಅವತರಣಿಕೆ, ಸೂ. ಭಾ. ೪-೪-೧೭. ಯೋಗಮಹಿಮೆಯಿಂದಲೂ ಈಶ್ವರಾನುಗ್ರಹದಿಂದ ಐಶ್ವರ್ಯವು ಬರಬಹುದು ಮಾಂ. ಭಾ. ೪-೯. ಆತ್ಮನಲ್ಲಿ ಈಶ್ವರ, ಈಶಿತವ್ಯ-ಎಂಬ ವಿಭಾಗವು ವ್ಯಾವಹಾರಿಕ. ಸೂ.ಭಾ. ೨-೧-೧, ೩-೨-೩೮.

## ಕ

**ಕರಣಾನಿ :-** ಬುದ್ಧೀಂದ್ರಿಯಗಳು ಐದು, ಕರ್ಮೇಂದ್ರಿಯಗಳು ಐದು, ಮನಸ್ಸು ಒಂದು - ಹೀಗೆ ಹನ್ನೊಂದು ಇಂದ್ರಿಯಗಳೂ ಆತ್ಮನಿಗೆ ಸಾಧನವಾಗಿರುವದರಿಂದ ಕರಣಗಳೆನಿಸುವವು. ಗೀ. ಭಾ. ೧೩-೫; ಮನಸ್ಸನ್ನು ಮನಸ್ಸು ಬುದ್ಧಿ ಎಂದು ಒಡೆದು ಹನ್ನೆರಡು ಕರಣಗಳನ್ನೂ (ಗೀ. ಭಾ.೧೮-೧೪), ಅಹಂಕಾರವನ್ನು ಬೇರ್ಪಡಿಸಿ ಹದಿಮೂರೆಂದೂ (ಗೀ. ಭಾ. ೧೩-೨೦), ಚಿತ್ತವನ್ನು ಬೇರ್ಪಡಿಸಿ ಹದಿನಾಲ್ಕೆಂದೂ (ಸೂ.ಭಾ. ೨-೪-೬) ಭಾವಿಸಬಹುದು. ಇವುಗಳಲ್ಲಿ ಹತ್ತು ಇಂದ್ರಿಯಗಳು ಬಾಹ್ಯಕರಣಗಳು, ಮನಸ್ಸು ಅಂತಃಕರಣವು. ಇವುಗಳಿಗೆ ಮುಖ್ಯಪ್ರಾಣವನ್ನೂ ಸೇರಿಸಿದರೆ **ಪ್ರಾಣಗಳು** ಎಂದು ಕರೆಯುವದುಂಟು. (ಸೂ.ಭಾ. ೨-೪-೬). ಆದರೆ ಮುಖ್ಯಪ್ರಾಣವು ಕರಣವಲ್ಲ (ಸೂ.ಭಾ. ೨-೪-೧೧) ಏಕೆಂದರೆ ಅದಕ್ಕೆ ವಿಷಯವಿಲ್ಲ. ಕರಣಗಳು ಸುಷುಪ್ತಿಯಲ್ಲಿ ಆತ್ಮನಲ್ಲಿ ಒಂದಾಗಿ ಬಿಡುವವು. (ಪ್ರ.ಭಾ. ೪-೧), ಆತ್ಮನಿಗೆ ಜಾಗ್ರತ್ಸ್ವಪ್ನಗಳಲ್ಲಿ ಕರಣಗಳ ಅಪೇಕ್ಷೆಯಿಂದಲೇ ಕರ್ತೃತ್ವಭೋಕ್ತೃತ್ವವುಂಟಾಗಿರುತ್ತದೆ; ಅವನು ಸ್ವತಃ ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ (ಸೂ.ಭಾ. ೨-೩-೪೦).

**ಕರ್ತೃತ್ವಭೋಕ್ತೃತ್ವೇ :-** ಇದನ್ನು ಮಾಡಿ ಇದನ್ನು ಅನುಭವಿಸುವೆನೆಂಬ ಸ್ವಭಾವವು. ಇದು ಉಪಾಧಿಗಳಾದ ಶರೀರೇಂದ್ರಿಯಗಳ ಧರ್ಮವನ್ನು ಮೇಲೆ ಹಾಕಿಕೊಳ್ಳುವ ಅಧ್ಯಾಸದಿಂದಲೇ ಆತ್ಮನಿಗೆ ಉಂಟಾಗಿರುತ್ತವೆ. ಅಧ್ಯಾಸಭಾಷ್ಯ, ಸೂ. ಭಾ. ೨-೩-೪೦, ಗೀ. ಭಾ. ೧೮-೬೭.

**ಕರ್ಮ** :- ಶಾಸ್ತ್ರದಲ್ಲಿ ಮಾಡೆಂದು ಅಥವಾ ಬಿಡೆಂದು ವಿಧಿಸಿರುವದು. ಸೂ.ಭಾ. ೧-೧-೪, ಗೀ. ಭಾ. ೧೮-೨೪. ಇದು ಪುರುಷತಂತ್ರವು, ಅಂದರೆ ಮಾಡುವದಕ್ಕೂ ಬಿಡುವದಕ್ಕೂ ಬರುವಂಥದ್ದು. ಸೂ.ಭಾ. ೧-೧-೪; ಅವಿದ್ಯಾ ಪೂರ್ವಕವಾದದ್ದು ಗೀ. ಭಾ. ೧೮-೬೬. ಕರ್ಮವನ್ನು ಕ್ರಿಯಾಕಾರಕಫಲ ವಿಜ್ಞಾನಪೂರ್ವಕವಾಗಿ ಮಾಡತಕ್ಕದ್ದಿರುತ್ತದೆ. ಮುಂ.ಭಾ. ೧-೧-೬, ಗೀ.ಭಾ. ೨-೨೧, ಸೂ. ಭಾ. ೧-೧-೧ ಜ್ಞಾನವು ಈ ವಿಷಯದಲ್ಲಿ ಕರ್ಮಕ್ಕೆ ತೀರ ವಿರುದ್ಧವಾಗಿರುತ್ತದೆ.

**ಕರ್ಮಕಾಣ್ಡಮ್** :- ಕರ್ಮವನ್ನು ವಿಧಿಸುವ ಅಥವಾ ನಿಷೇಧಿಸಿರುವ ವೇದ ಭಾಗ. ಇಷ್ಟದ ಪ್ರಾಪ್ತಿಗೂ ಅನಿಷ್ಟದ ನಿವೃತ್ತಿಗೂ ಉಪಾಯವೇನೆಂಬುದನ್ನು ತಿಳಿಸುವದಕ್ಕೆ ಕರ್ಮಕಾಂಡವು ಹೊರಟಿರುತ್ತದೆ. ದೇಹವ್ಯತಿರಿಕ್ತನಾದ ಆತ್ಮನಿದ್ದಾನೆಂದು ತಿಳಿದವರಿಗೆ ಈ ಕಾಂಡವು ಕರ್ಮವೆಂಬ ಉಪಾಯವನ್ನು ತಿಳಿಸುತ್ತದೆ. ಬೃ.ಭಾ. ಅವತರಣಿಕೆ, ತೈ. ಭಾ. ಅವತರಣಿಕೆ.

**ಕರ್ಮಾಙ್ಗಾವಬದ್ಧೋಪಾಸನಾನಿ** :- ಕರ್ಮಗಳನ್ನು ಮಾಡುವವರೇ ಮಾಡಬಹುದಾದ ಉಪಾಸನೆಗಳು. ಈ ಉಪಾಸನೆಗಳಿಗೆ ಅಲ್ಲಲ್ಲಿ ಹೇಳಿರುವ ಫಲಗಳೇ ಆಗುವವು. ಇವೂ ಜ್ಞಾನದಂತೆ ಮಾನಸವಾಗಿರುವದರಿಂದ ಜ್ಞಾನ ಪ್ರಕರಣದಲ್ಲಿಯೇ ಅವುಗಳನ್ನು ಹೇಳಿದೆ. ಛಾಂ. ಭಾ. ಅವತರಣಿಕೆ

**ಕರ್ಮೇನ್ದ್ರಿಯಾಣಿ** :- ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥ- ಎಂಬ ಕ್ರಿಯೆಯನ್ನು ಮಾಡುವದಕ್ಕೆ ಸಾಧನವಾಗಿರುವ ಇಂದ್ರಿಯಗಳು. ಗೀ. ಭಾ. ೩-೬, ೧೩-೫.

**ಕಲಾಪ್ರಲಯಃ** :- ಪ್ರಾಣನೇ ಮುಂತಾದ ಹದಿನಾರು ಕಲೆಗಳನ್ನು ಜ್ಞಾನದಿಂದ ಹುಸಿಯೆಂದು ಅರಿತುಕೊಂಡು ಆತ್ಮನಲ್ಲಿಯೇ ಅಡಗಿಸುವದು. ಪ್ರ. ಭಾ. ೬-೫.

**ಕಲ್ಪಿತ** :- ಅಧ್ಯಸ್ತವಾಗಿರುವ, ತಪ್ಪು ತಿಳಿವಳಿಕೆಯಿಂದ ಕಾಣುವ.

**ಕಷಾಯ** :- ರಾಗದ್ವೇಷವೇ ಮುಂತಾದ ಅಂತಃಕರಣದೋಷವು. ಮರದ ಚಕ್ಕೆಯೇ ಮುಂತಾದವುಗಳಿಂದಾಗುವ ಬಣ್ಣದಂತೆ ಇರುವದರಿಂದ ಇದಕ್ಕೆ ಕಷಾಯವೆಂದು ಹೆಸರು. ಛಾಂ. ಭಾ. ೭-೨೬-೨.

**ಕಾಪಿಲಕಾಣಾದಯಃ** :- ಕಪಿಲರ ಅನುಯಾಯಿಗಳಾದ ಸಾಂಖ್ಯರು, ಕಣಾದರ ಅನುಯಾಯಿಗಳಾದ ವೈಶೇಷಿಕರು ಮುಂತಾದ ತಾರ್ಕಿಕರು. ಇವರ ತರ್ಕಕ್ಕೆ ಮೂಲಪ್ರಮಾಣವಿಲ್ಲ. ತೈ. ಭಾ. ೨೫೨.

**ಕಾಮ** :- ೧. ಅವಿದ್ಯೆಯಿಂದುಂಟಾಗಿ ಕರ್ಮಕ್ಕೆ ಕಾರಣವಾಗಿರುವ ಇಚ್ಛೆ;

ಇದು ಹೃದಯಾಶ್ರಿತವಾಗಿರುವದು, ಆತ್ಮನ ಧರ್ಮವಲ್ಲ. ತೈ.ಭಾ. ಅವತರಣಿಕೆ; ಕ.ಭಾ. ೨-೩-೧೪. (೨) ಇಚ್ಛೆಗೆ ವಿಷಯವಾಗಿರುವ ಶಬ್ದಾದಿಗಳು. ಕ.ಭಾ. ೧-೨-೩, ೨-೧-೨.

**ಕಾಮ್ಯಕರ್ಮ** :- ಫಲಾರ್ಥಿಗಳಿಗಾಗಿ ಶಾಸ್ತ್ರದಲ್ಲಿ ವಿಧಿಸಿರುವ ಕರ್ಮ; ಇವುಗಳನ್ನು ಬಿಟ್ಟು ಚಿತ್ತಶುದ್ಧಿಗಾಗಿ ನಿತ್ಯಕರ್ಮವನ್ನು ಮಾಡುವವನು ಮೋಕ್ಷಕ್ಕೆ ಅಧಿಕಾರಿ ಗೀ. ಭಾ. ೨-೪೩, ೪೪.

**ಕಾರಕಮ್** :- ಕ್ರಿಯೆಯನ್ನುಂಟುಮಾಡುವ ಕರ್ತ್ರಾದಿಸಾಧನ. ಕಾರಕಾಪೇಕ್ಷವಾದದ್ದು ವಸ್ತುವಿನ ತತ್ತ್ವವಲ್ಲ; ಆದ್ದರಿಂದ ಸುಷುಪ್ತಿಯಲ್ಲಿ ಯಾವ ಕಾರಕವನ್ನೂ ಬಯಸದೆ ಇರುವ ಆತ್ಮರೂಪವು ಸ್ವಾಭಾವಿಕವಾದದ್ದು, ಜಾಗ್ರತ್ ಸ್ವಪ್ನಗಳ ರೂಪವು ಆವಿದ್ಯಕ. ತೈ. ಭಾ. ೨-೮, ಶಾಸ್ತ್ರವು ಕಾರಕವಲ್ಲ, ಹೊಸದಾಗಿ ಯಾವದನ್ನೂ ಉಂಟುಮಾಡುವದಿಲ್ಲ. ಗೀ. ಭಾ. ೩ ಅವತರಣಿಕೆ (ಭಾ. ಭಾ. ೧೪೨)

**ಕಾರಣಮ್** :- ಸಕಾರಣವಾದದ್ದು ಸತ್ತಲ್ಲ, ಗೀ. ಭಾ. ೨-೧೬, ಬ್ರಹ್ಮಕ್ಕಿಂತ ಬೇರೆ ಯಾವದೂ ನಿಜವಾಗಿ ಕಾರಣವೆನಿಸಲಾರದು. ಸೂ.ಭಾ. ೧-೨.೨೭. ಆದ್ದರಿಂದ ಸತ್ತಾದದ್ದು ಕಾರಣವಾದೀತೇ ಹೊರತು ಅಸತ್ತು ಕಾರಣವಲ್ಲ, ಮಾಂ. ಕಾ. ಭಾ. ೩-೨೭; ಸದ್ರೂಪವಾದ ಬ್ರಹ್ಮವು ಮಾಯಿಕವಾದ ಕಾರಣವು, ಪರಮಾರ್ಥ ಕಾರಣವಲ್ಲ. ಮಾಂ. ಕಾ. ಭಾ. ೩-೨೭.

**ಕಾರಣಶರೀರವ್** :- ಅವಿದ್ಯೆಯಿಂದ ಕಲ್ಪಿತವಾದ ಶರೀರಬೀಜವು ಎಂಬರ್ಥದಲ್ಲಿ ಈಶಾವಾಸ್ಯಭಾಷ್ಯ ೮ರಲ್ಲಿ ಕಾಣುತ್ತದೆ. ಈ ಶಬ್ದವನ್ನು ಮತ್ತೆಲ್ಲಿಯೂ ಭಾಷ್ಯದಲ್ಲಿ ಉಪಯೋಗಿಸಿಲ್ಲ. ಮೂಲಾವಿದ್ಯೆಯೇ ಕಾರಣಶರೀರವು ಎಂಬ ಈಚಿನ ವೇದಾಂತಿಗಳ ವಾದವು ಭಾಷ್ಯದಲ್ಲಿಲ್ಲ.

**ಕಾರ್ಯಮ್** :- ಕಾರ್ಯವು ಕಾರಣವಾಗಿಯೇ ಮೊದಲು ಇತ್ತು ; ಕಾರ್ಯಾವಸ್ಥೆಯಲ್ಲಿಯೂ ಕಾರಣವನ್ನು ಬಿಟ್ಟು ಅದು ಬೇರೆಯಾಗಿರುವದಿಲ್ಲ, ಸೂ. ಭಾ. ೨-೧-೧೪, ೨-೧-೭.

**ಕಾರ್ಯಕರಣಸಙ್ಘಾತಃ** :- ಆತ್ಮನಿಗಾಗಿ ಭೋಗವನ್ನುಂಟುಮಾಡುವದಕ್ಕೆ ಒಂದರೊಡನೊಂದು ಸೇರಿಕೊಂಡು ವ್ಯಾಪಾರಮಾಡುತ್ತಿರುವ ಶರೀರೇಂದ್ರಿಯಗಳ ಗುಂಪು. ಐ. ಭಾ. (ಭಾ.ಭಾ.೫೧), ತೈ.ಭಾ.೧-೪. (ಭಾ.ಭಾ.೨೩), ಪ್ರ.ಭಾ.೨೫ (ಭಾ. ಭಾ. ೨೫), ಗೀ.ಭಾ. ೧೩-೨ (ಭಾ.ಭಾ. ೨೨೫). ಇದು ಅವಿದ್ಯಾಕಲ್ಪಿತ. ಸೂ.ಭಾ. ೨-೧-೧೪.

**ಕಾರ್ಯಕಾರಣಬನ್ಧೌ** :- ಜ್ಞಾನಾಭಾವವೆಂಬ ಕಾರಣಬಂಧವು ಸುಷುಪ್ತಾತ್ಮನಿಗೂ ಇದರ ಜೊತೆಗೆ ಅನ್ಯಥಾಜ್ಞಾನವೆಂಬ ಕಾರ್ಯಬಂಧವು ಜಾಗ್ರತ್ಸ್ವಪ್ನಾತ್ಮರಿಗೂ ಇರುವವು. ಮಾಂ. ಕಾ. ಭಾ. ೧-೧೧.

**ಕಾರ್ಯಕಾರಣಭಾವಃ** :- ಸತ್ತಾದ ಆತ್ಮನಿಗೂ ಅಸತ್ತಾದ ಜಗತ್ತಿಗೂ ಮಾಯೆಯಿಂದ ಕಾರ್ಯಕಾರಣಭಾವವಿರುತ್ತದೆ, ನಿಜವಾಗಿಲ್ಲ, ಮಾಂ. ಕಾ. ಭಾ. ೩-೨೭; ಧರ್ಮಾಧರ್ಮಗಳಿಗೂ ಶರೀರಕ್ಕೂ ನಿಜವಾದ ಕಾರ್ಯಕಾರಣಭಾವವಿಲ್ಲ. ಮಾಂ. ಕಾ. ಭಾ. ೩-೧೭, ೨೦; ಎಚ್ಚರ ಕನಸುಗಳಿಗೂ ಒಂದಕ್ಕೊಂದಕ್ಕೆ ನಿಜವಾದ ಕಾರ್ಯಕಾರಣಭಾವವಿಲ್ಲ. ಮಾಂ. ಕಾ. ಭಾ. ೪-೩೯. ಪರಮಾರ್ಥವಾಗಿ ಕಾರ್ಯ ಕಾರಣಭಾವವಿಲ್ಲವೇ ಇಲ್ಲ, ಮಾಂ. ಕಾ. ಭಾ. ೪-೪೦.

**ಕಾರ್ಯಕಾರಣಸಮಾಹಾರಶಕ್ತಿಃ, ಕಾರ್ಯಕಾರಣಬೀಜಮ್** :- ಕಾರ್ಯಕಾರಣ ವಾಗಿರುವದರ ಶಕ್ತಿಗಳ ಒಟ್ಟಾಗಿದ್ದುಕೊಂಡಿರುವ ಅವ್ಯಕ್ತ, ಅವ್ಯಾಕೃತ. ಕ. ಭಾ. ೧-೩-೧೧ (ಭಾ.ಭಾ.೯) ಮುಂ. ಭಾ. ೨-೧-೨. ಇದು ಅವಿದ್ಯಾಕಲ್ಪಿತ, ಸೂ.ಭಾ. ೨-೧-೧೪.

**ಕಾಲಾನ್ತರಮುಕ್ತಿಃ** :- ಈ ಜನ್ಮದಲ್ಲಿ ಈಗಲೆ ಆಗುವ ಮುಕ್ತಿಯಲ್ಲ, ಸತ್ತಬಳಿಕ ಉಪಾಸನೆಯ ಫಲವಾಗಿ ಆಗುವ ಮುಕ್ತಿ. ಗೀ.ಭಾ. ೮-೧೨ (ಭಾ.ಭಾ.೫೦೮).

**ಕಾರ್ಯಬ್ರಹ್ಮ** :- ನಿಜವಾದ ಬ್ರಹ್ಮದಿಂದ ಮೊದಲು ಹುಟ್ಟುವ ಹಿರಣ್ಯಗರ್ಭ. ಇದಕ್ಕೆ ಸಗುಣಬ್ರಹ್ಮ. ಸಾಕಾರಂ ಬ್ರಹ್ಮ, ಸವಿಶೇಷಂ ಬ್ರಹ್ಮ, ಸೋಪಾಧಿಕಂ ಬ್ರಹ್ಮ, ಸವಿಕಲ್ಪಕಂ ಬ್ರಹ್ಮ, ಹಿರಣ್ಯಗರ್ಭ, ಅಪರಂಬ್ರಹ್ಮ ಎಂದೂ ಹೆಸರು. ಮುಂ. ಭಾ. ೧-೧೯ (ಭಾ.ಭಾ.) ೨೫; ಜಗತ್ಕಾರಣವಾದ ಬ್ರಹ್ಮವೇ ನಿಜವಾದ ಬ್ರಹ್ಮವು; ಅದೇ ಕೆಲವು ಉಪಾಧಿಕರ್ಮಗಳಿಂದೊಡಗೂಡಿ ಉಪಾಸನೆಗಾಗಿ ಉಪದಿಷ್ಟವಾಗಿದ್ದು ಕಾರ್ಯಬ್ರಹ್ಮ ಅಥವಾ ಅಪರಬ್ರಹ್ಮವೆನಿಸುತ್ತದೆ. ಸೂ. ಭಾ. ೩-೨-೧೧, ೩-೨-೧೪, ೪-೩-೯, ೪-೩-೧೦; ಉತ್ತರಾಯಣ ಮಾರ್ಗದಿಂದ ಪಡೆಯುವ ಬ್ರಹ್ಮವು ಇದೇ. ಸೂ. ಭಾ. ೪-೩-೭.

**ಕಾಲಃ** :- ಕಾಲವೂ ವೇದಾಂತಮತದಲ್ಲಿ ನಿತ್ಯವಲ್ಲ, ಆಕಾಶದಂತೆ ಅದು ಬ್ರಹ್ಮದ ಕಾರ್ಯವೇ ಆಗಿರುತ್ತದೆ. ಸೂ.ಭಾ. ೨-೩-೭. ಕನಸು ಎಚ್ಚರಗಳಲ್ಲಿ ಒಂದೇ ಕಾಲವಿಲ್ಲ. ಮಾಂ. ಕಾ. ೨-೨-; ಚಿತ್ತವೃತ್ತಿಯಷ್ಟೇ ಕಾಲವುಳ್ಳ ಪದಾರ್ಥಗಳು, ಅನ್ಯೋನ್ಯಪರಿಚ್ಛೇದಕಾಲವುಳ್ಳ ಪದಾರ್ಥಗಳು- ಇವೆರಡೂ ಕನಸಿನ ಪದಾರ್ಥಗಳಂತೆ ಹುಸಿತೋರಿಕೆ. ಮಾಂ. ಕಾ. ಭಾ. ೨-೧೪.

**ಕೂಟಸ್ಥ :**:- (೧) ಇದ್ದಂತೆ ಇರುವ, ಯಾವ ವಿಕಾರವೂ ಇಲ್ಲದ ಬ್ರಹ್ಮ ಸೂ.ಭಾ. ೧-೧-೪. (೨) ರಾಶಿಯಂತೆ ಇರುವ ಮಾಯೆ ಮುಂತಾದ ರೂಪದಲ್ಲಿರುವ ಅವ್ಯಾಕೃತ. ಗೀ. ಭಾ. ೧೫-೧೬.

**ಕೇವಲತರ್ಕಃ** :- ಅನುಭವದ ಆಧಾರವಿಲ್ಲದ, ಆಗಮವಿರುದ್ಧವಾದ, ಒಣತರ್ಕ; ಇದಕ್ಕೆ ಎಂದಿಗೂ ನಿಲುಗಡೆಯಿಲ್ಲ. ಸೂ.ಭಾ. ೨-೧-೧೧.

**ಕೇವಲಾತ್ಮದರ್ಶೀ** :- ಅದ್ವಿತೀಯನಾದ ಪರಮಾತ್ಮನನ್ನು ಅರಿತುಕೊಂಡ ಜ್ಞಾನಿ, ದೇಹವನ್ನೇ ಆತ್ಮನೆಂದು ತಿಳಿದಿರುವವನಲ್ಲ. ಗೀ. ಭಾ. ೫-೨೦.

**ಕೈವಲ್ಯಮ್** :- ಅದ್ವಿತೀಯನಾದ ಆತ್ಮನೊಬ್ಬನೇ ಇರುವ ಸ್ಥಿತಿ, ಮುಕ್ತಿ . ಗೀ. ಭಾ. ೧೩-೨. ಜ್ಞಾನಿಯು ದೇಹವನ್ನು ಬಿಟ್ಟು ಕೈವಲ್ಯವನ್ನು ಹೊಂದಿದರೆ ಜನ್ಮಾಂತರವಿಲ್ಲ. ಸೂ. ಭಾ. ೩-೩-೩೨.

**ಕೌಪೀನಮ್** :- ಪರಮಹಂಸಪರಿವ್ರಾಜಕನು ತಾನೇ ದೊರೆತ ಕೌಪೀನ ಮಾತ್ರ ಧಾರಣೆಯಿಂದಲೇ ತೃಪ್ತನಾಗಿರುವನು. ಮಾಂ. ಕಾ. ಭಾ. ೨-೩೭.

**ಕ್ರಮಮುಕ್ತಿಃ** :- ಅರ್ಚಿರಾದಿಮಾರ್ಗದಿಂದ ಬ್ರಹ್ಮಲೋಕಕ್ಕೆ ಹೋದ ಉಪಾಸಕರು ಅಲ್ಲಿ ಜ್ಞಾನವನ್ನು ಹೊಂದಿ ಪಡೆಯುವ ಮುಕ್ತಿ , ಈ ಜನ್ಮದಲ್ಲಿ ಇಲ್ಲಿಯೇ ಜ್ಞಾನದಿಂದ ಪಡೆಯುವ ಸದ್ಯೋಮುಕ್ತಿಯಲ್ಲ, ಸೂ.ಭಾ. ೪-೩-೧೦.

**ಕ್ರಿಯಾಕಾರಕಫಲಬುದ್ಧಿ :**:- ಇಂಥಿಂಥ ಸಾಧನಗಳಿಂದ ಇಂಥಿಂಥ ಕರ್ಮವು ಆಗಿ ಇಂಥಿಂಥ ಫಲವು ಉಂಟಾಗುವದೆಂಬ ಬುದ್ಧಿಯು. ಇದು ಅವಿದ್ಯೆಯಿಂದ ತೋರಿಕೊಂಡಿರುತ್ತದೆ. ಈ ಬುದ್ಧಿಯು ಸುಷುಪ್ತಿ , ಸಮಾಧಿ- ಮುಂತಾದ ಅವಸ್ಥೆಗಳಲ್ಲಿರುವದಿಲ್ಲ; ದೇಹ, ಇಂದ್ರಿಯ- ಮುಂತಾದವುಗಳೇ ನಾವು ಎಂಬ ಬುದ್ಧಿಯಿರುವಾಗಲೇ ಇದು ಇರುತ್ತದೆ. ಆದ್ದರಿಂದ ಇದು ಭ್ರಾಂತಿಯು ಎಂದು ನಿಶ್ಚಯಿಸಿ- 'ನಾನು ಕ್ರಿಯೆಯಾಗಲಿ ಕಾರಕಗಳಾಗಲಿ ಫಲವಾಗಲಿ ಇಲ್ಲದ ಕೇವಲಾತ್ಮನು' ಎಂದು ತಿಳಿಯುವ ವಿದ್ಯೆಯಿಂದ ಅವಿದ್ಯೆಯು ನಾಶವಾಗುವದು. ಗೀ. ಭಾ. ೧೮-೬೬.

**ಕ್ಲೇಶಾಃ** :- ಅವಿದ್ಯೆ , ಅಸ್ಮಿತೆ ಮುಂತಾದ ಯೋಗಸೂತ್ರದಲ್ಲಿ ಹೇಳಿರುವ ದೋಷಗಳು; ಇವುಗಳು ಜ್ಞಾನದಿಂದ ನಾಶವಾದರೆ ಕರ್ಮಾಶಯವು ಸಂಪೂರ್ಣವಾಗಿ ನಾಶವಾಗುವದು. ಸೂ.ಭಾ.೩-೩-೩೨.

**ಕ್ಷೇತ್ರಕ್ಷೇತ್ರಜ್ಞಸಂಯೋಗಃ** :- ದೇಹವೇ ಮುಂತಾದ ಅನಾತ್ಮಕ್ಕೂ ಅದನ್ನು ಅರಿಯುತ್ತಿರುವ ಚೈತನ್ಯರೂಪನಾದ ಆತ್ಮನಿಗೂ ಇರುವ ಸ್ವರೂಪಭೇದವನ್ನು ವಿಂಗಡಿಸಿ ಅರಿಯದೇ ಇರುವದರಿಂದ ಆಗಿರುವ ಅನ್ಯೋನ್ಯಾಧ್ಯಾಸ, ಅವಿದ್ಯೆ . ಗೀ. ಭಾ. ೧೩-೨೬; ಸೂ.ಭಾ. ಉಪೋದ್ಘಾತ.

**ಕ್ಷೇಮಃ :-** ಜ್ಞಾನಿಯ ಶರೀರವು ಬಿದ್ದಬಳಿಕ ಅವಶ್ಯವಾಗಿ ದೊರಕುವ ಮುಕ್ತಿ ಅಥವಾ ಕೈವಲ್ಯ , ಸೂ.ಭಾ. ೪-೧-೧೫.

## ಗ

**ಗನ್ಧರ್ವನಗರಮ್ :-** ಆಕಾಶದಲ್ಲಿ ಆಕಸ್ಮಾತ್ತಾಗಿ ತೋರಿಹಾರುವ ನಗರ, ಮಾಂ. ಕಾ. ಭಾ. ೨-೩೧.

**ಗುಣೋಪಸಂಹಾರಃ :-** ಬೇರೆಬೇರೆ ಕಡೆಯಲ್ಲಿ ಶ್ರುತಿಯಲ್ಲಿ ಕಂಡುಬರುವ ಒಂದೇ ಉಪಾಸನೆಯಲ್ಲಿ ಉಪಾಸ್ಯವಾದ ಬ್ರಹ್ಮದ ಗುಣಗಳನ್ನೆಲ್ಲ ಸೇರಿಸಿಕೊಂಡು ಉಪಾಸನೆ ಮಾಡುವದು, ಸೂ.ಭಾ. ೩-೩-೧೯.

**ಗುರುಸಂಪ್ರದಾಯಃ :-** ಪರಂಪರೆಯಿಂದ ಗುರುಗಳು ಶಿಷ್ಯನಿಗೆ ಕೊಡುವ ಸರಿಯಾದ ಜ್ಞಾನದ ಉಪದೇಶ, ಗೀ.ಭಾ. ೧೮-೫೦.

**ಗುರೂಪಸದನಮ್ :-** ಗುರುವಿನ ಬಳಿಗೆ ಶಾಸ್ತ್ರದಲ್ಲಿ ವಿಧಿಸಿರುವ ರೀತಿಯಿಂದ ಶಿಷ್ಯನಾಗಿ ಬರುವದು, ಗೀ.ಭಾ. ೪-೩೯.

**ಗುಹಾ :-** ಹೃದಯ, ಬುದ್ಧಿ. ಬ್ರಹ್ಮವು ಬುದ್ಧಿರೂಪವಾದ ಗುಹೆಯಲ್ಲಿ ತಿಳಿಯಬರುವದರಿಂದ ಅಲ್ಲಿದೆ ಎಂದು ಶ್ರುತಿ ಹೇಳುತ್ತದೆ. ತೈ.ಭಾ. ೨-೧.

**ಗುಹಾಗ್ರನ್ಥಯಃ :-** ಹೃದಯದಲ್ಲಿರುವ ಅವಿದ್ಯಾಗ್ರಂಥಿಗಳು, ಗಂಟಿನಂತೆ ಗಟ್ಟಿಯಾಗಿ ಸೇರಿಕೊಂಡಿರುವ ಅವಿದ್ಯಾಕಾಮಗಳು. ಮುಂ. ೩-೨-೯.

**ಗ್ರಹಣಾಗ್ರಹಣೇ :-** ಅರಿಯುವದು, ಅರಿಯದಿರುವದು- ಎಂಬೀ ಎರಡೂ ಸೂರ್ಯನಲ್ಲಿ ಬೆಳಕುಕತ್ತಲೆಗಳಂತೆ ಕಲ್ಪಿತವಾಗಿರುತ್ತವೆ, ಮಾಂ. ಕಾ.ಭಾ. ೩-೩೬.

**ಗ್ರಾಹ್ಯಗ್ರಾಹಕೇ :-** ಅರಿಯುವ ಇಂದ್ರಿಯಾದಿಗಳು, ಅರಿಯಲ್ಪಡುವ ವಿಷಯಗಳು ಎಂಬ ರೂಪಭೇದಗಳು; ಇವು ಎಚ್ಚರದಲ್ಲಿಯೂ ಕನಸಿನಲ್ಲಿಯೂ ಸಮಾನವಾಗಿರುವವು, ಮಾಂ. ಕಾ. ಭಾ. ೪-೩೭.

## ಘ

**ಘಟಕರಕಾಪವರಕಾದ್ಯಾಕಾಶಾಃ :-** ಗಡಿಗೆಯ ಆಕಾಶ, ಕುಡಿಕೆಯ ಆಕಾಶ, ಕೋಣೆಯ ಆಕಾಶ ಮುಂತಾಗಿ ಉಪಾಧಿಯಿಂದಾಗಿರುವ ಆಕಾಶ ಭೇದಗಳು, ಮಾಂ. ೩-೬.

## ಚ

**ಚತುರ್ಥಃ :-** ನಾಲ್ಕನೆಯವ; ವಿಶ್ವ, ತೈಜಸ, ಪ್ರಾಜ್ಞ - ಎಂಬ ಅವಸ್ಥಾತ್ರಯ ಪರಿಚ್ಛಿನ್ನರೂಪದಿಂದ ತೋರುವನಲ್ಲದ. ಶುದ್ಧಾತ್ಮ. ಮಾಂ. ಭಾ. ೭.

**ಚತುಷ್ಪಾತ್ :-** ನಾಲ್ಕು ಪಾದಗಳುಳ್ಳವ; ಆತ್ಮಪ್ರಾಪ್ತಿಗೆ ಸಾಧನವಾಗಿರುವ ವಿಶ್ವ, ತೈಜಸ, ಪ್ರಾಜ್ಞ - ಎಂಬ ಮೂರು ಪಾದಗಳೂ ಪ್ರಾಪ್ಯವಾದ ತುರೀಯನೆಂಬ ನಾಲ್ಕನೆಯ ಪಾದವೂ ಉಳ್ಳ ಆತ್ಮನು. ಮಾಂ. ಭಾ. ೨.

**ಚಿತ್ತಮ್ :-** ಸಾಮಾನ್ಯವಾದ ಅರಿವು, ಅರಿವುಳ್ಳ ಅಂತಃಕರಣ, ಸೂ.ಭಾ. ೨-೩-೩೨.

**ಚಿಚ್ಛಕ್ತಿಸ್ವರೂಪಮಾತ್ರಃ :-** ಜ್ಞಾನಶಕ್ತಿಯೇ ಸ್ವರೂಪವಾಗಿ ಉಳ್ಳ ಆತ್ಮನು, ಕೇ. ೨-೪.

**ಚಿತ್ತಕಾಲಃ, ಚಿತ್ತಪರಿಚ್ಛೇದ್ಯಃ :-** ಮನಸ್ಸಿನ ಅರಿವಿನ ಕಾಲಕ್ಕೆ ಇರುವ ಮನೋರಥವೇ ಮುಂತಾದವುಗಳು. ಮಾಂ. ಕಾ. ಭಾ. ೨-೧೪.

**ಚಿತ್ತಭೂಮಿಃ :-** ಅಧ್ಯಾತ್ಮಯೋಗದ ಚಿತ್ತದ ಅರಿವಿನ ಮಟ್ಟ; ವಾಕ್ಕು, ಮನಸ್ಸು- ಮುಂತಾದವುಗಳು, ಗೀ. ಭಾ. ೬-೩೫.

**ಚಿತ್ತವಿಕ್ಷೇಪಃ :-** ಚಿತ್ತದ ಹರಿದಾಟ, ಗೀ. ಭಾ. ೬-೧

**ಚಿತ್ತಸ್ಪನ್ದನಮ್, ಚಿತ್ತಸ್ಪನ್ದಿತಮ್ :-** ಅಂತಃಕರಣದ ವ್ಯಾಪಾರದ ಫಲವಾಗಿರುವ ದ್ವೈತ, ಮಾಂ. ಕಾ. ಭಾ. ೩-೧೮, ೪-೭೨.

**ಚಿನ್ಮಾತ್ರಃ, ಚಿನ್ಮಾತ್ರಘನಃ, ಚೈತನ್ಯಮಾತ್ರೈಕರಸಃ :-** ಬರಿಯ ಜ್ಞಾನವಲ್ಲದೆ ಮತ್ತೆ ಯಾವದರ ಸ್ವರೂಪವೂ ಅಲ್ಲದ, ಪ್ರ.ಭಾ.೪-೩, ಕ.ಭಾ.೧-೩-೧೧, ಗೀ.ಭಾ. ೧೮-೫೫.

**ಚಿನ್ಮಾತ್ರಜ್ಯೋತಿಃ :-** ಬರಿಯ ಜ್ಞಾನವೆಂಬ ಬೆಳಕಿನ ಸ್ವರೂಪದ ಆತ್ಮ, ಕೇ. ಭಾ. ೧-೪.

**ಚೈತನ್ಯಮಾತ್ರಸತ್ತಾಕಮ್ :-** ಜ್ಞಾನವೆಂಬದೊಂದೇ ಇರವಾಗಿ ಉಳ್ಳ ಆತ್ಮ, ಕೇ.ಭಾ. ೧-೫.

**ಚೈತನ್ಯಾಭಾಸಃ :-** ಅಂತಃಕರಣದಲ್ಲಿ ತೋರುವ ಆತ್ಮನ ಅರಿವಿನ ಹೊಳಪು, ಈ.ಭಾ.೪.

## ಜ

**ಜಗತ್ಕಾರಣಮ್ :-** ನಾಮರೂಪಗಳಿಂದ ಕೂಡಿದ ಜಗತ್ತಿಗೆ ಕಾರಣವಾದ ಬ್ರಹ್ಮ. ಸೂ.ಭಾ. ೧-೧-೨; ಕಾರ್ಯವಾದ ಜಗತ್ತು ಕಾರಣವಾದ ಬ್ರಹ್ಮಕ್ಕಿಂತ ಬೇರೆಯಿಲ್ಲವೆಂದೂ ಜಗತ್ತಿಗೆ ಬ್ರಹ್ಮವು ಕಾರಣವೆಂಬುದು ಅವಿದ್ಯಾಕಲ್ಪಿತವಾದ ನಾಮರೂಪಗಳ ವ್ಯಾಕರಣದಿಂದ ಮಾತ್ರವೇ ಎಂದೂ ಆಚಾರ್ಯರ ಅಭಿಪ್ರಾಯ. ಸೂ.ಭಾ.೨-೧-೧೪.

**ಜಗದಾತ್ಮಾ :-** ಜಗತ್ತಿಗೆಲ್ಲ ಆತ್ಮನಾಗಿರುವ ಹಿರಣ್ಯಗರ್ಭ, ಮುಂ.ಭಾ.೧-೧-೮.

**ಜಲಸೂರ್ಯಕಃ :-** ನೀರಿನಲ್ಲಿ ಕಾಣುವ ಸೂರ್ಯಪ್ರತಿಬಿಂಬ, ಪರಮಾತ್ಮನಲ್ಲಿ ಕಲ್ಪಿತನಾಗಿರುವ ಜೀವನಿಗೆ ಉಪಮಾನ, ಪ್ರ.ಭಾ. ೪-೯; ಸೂ.ಭಾ. ೩-೨-೧೮; ಗೀ.ಭಾ. ೧೫-೭.

**ಜಾಗರಿತಮ್, ಜಾಗ್ರತ್ :-** ಎಚ್ಚರದವಸ್ಥೆ. ಈ ಅವಸ್ಥೆಯಲ್ಲಿರುವ ಆತ್ಮನು ನಿಜವಾಗಿ ವೈಶ್ವಾನರನೇ, ಮಾಂ. ಭಾ. ೩.

**ಜಾತಿಗುಣಕ್ರಿಯಾಸಂಬನ್ಧಾಃ :-** ಶಬ್ದವು ಅರ್ಥವನ್ನು ಹೇಳಬೇಕಾದರೆ ಗೋತ್ವಾದಿಜಾತಿಯನ್ನೋ, ನೀಲತ್ವಾದಿಗುಣಗಳನ್ನೋ, ಪಾಕಾದಿಕ್ರಿಯೆಗಳನ್ನೋ, ಆಯಾ ವಸ್ತುಗಳನ್ನುಳ್ಳವನೆಂಬ ಸಂಬಂಧವನ್ನೋ, ತಿಳಿಸಬೇಕು. ಆತ್ಮನಲ್ಲಿ ಇವು ಯಾವವೂ ಇಲ್ಲದ್ದರಿಂದ ಆತ್ಮನನ್ನು ಶಬ್ದದಿಂದ ಹೇಳುವದಕ್ಕೆ ಬರುವದಿಲ್ಲ. ಗೀ.ಭಾ. ೧೩-೧೨; ಬೃ.ಭಾ. ೨-೩-೬.

**ಜೀವನ್ಮುಕ್ತಃ :-** ಬದುಕಿರುವಾಗಲೇ ಮುಕ್ತನಾದವನು, ಇದೆಲ್ಲವೂ ನಾನೂ ಬ್ರಹ್ಮವೇ ಎಂದು ತಿಳಿದುಕೊಂಡಿರುವಾತನು, ಗೀ.ಭಾ. ೬-೨೭. ಜೀವನ್ಮುಕ್ತನಿಗೂ ಅವಿದ್ಯಾಲೇಶವುಂಟೆಂಬ ಪಕ್ಷವು ಭಾಷ್ಯದಲ್ಲಿ ಸಿಕ್ಕುವದಿಲ್ಲ.

**ಜೀವಾಃ :-** ಅವಿದ್ಯೆಯಿಂದ ತಮ್ಮ ಸ್ವರೂಪವನ್ನು ತಿಳಿಯದವರು, ಸೂ.ಭಾ. ೧-೪-೩; ಅವಿದ್ಯೆಯಿಂದ ಕಲ್ಪಿತವಾದ ಕಾರ್ಯಕರಣಸಂಘಾತಗಳುಳ್ಳವರು, ಸಂಸಾರಿಗಳು. ಅವಿದ್ಯಾಕೃತವಾದ ನಾಮರೂಪಗಳೆಂಬ ಉಪಾಧಿಯುಳ್ಳವನು ಈಶ್ವರನು, ಆ ನಾಮರೂಪಗಳಿಂದಾಗಿರುವ ಶರೀರಾದಿಗಳುಳ್ಳವರು ಜೀವರು- ಎಂದು ಒಬ್ಬ ಆತ್ಮನಲ್ಲಿಯೇ ಜೀವೇಶ್ವರವಿಭಾಗವು ಅವಿದ್ಯೆಯಿಂದ ಕಲ್ಪಿತವಾಗಿರುತ್ತದೆ, ಸೂ.ಭಾ. ೨-೧-೧೪, ೧-೪-೭.

**ಜ್ಞಾನಮ್ :-** ತಿಳಿವಳಿಕೆ. ಆತ್ಮನು ಅದ್ವಿತೀಯನು, ನಿತ್ಯಶುದ್ಧಮುಕ್ತನು- ಎಂದು ತಿಳಿಯುವ ಸರಿಯಾದ ತಿಳಿವಳಿಕೆ. ಆತ್ಮಾದಿಗಳ ಶಾಸ್ತ್ರೀಯವಾದ ತಿಳಿವಳಿಕೆಯನ್ನು

ಜ್ಞಾನವೆಂದೂ ಅದನ್ನು ಅನುಭವಕ್ಕೆ ತಂದುಕೊಳ್ಳುವದನ್ನು ವಿಜ್ಞಾನವೆಂದೂ ವಿಂಗಡಿಸುವದುಂಟು. ಗೀ.ಭಾ.೯-೧. ಅಮಾನಿತ್ವಾದಿಜ್ಞಾನ ಸಾಧನ ೧೩-೧೭. ಉಪಾಸನೆಯನ್ನೇ ಜ್ಞಾನವೆಂದೂ ಅದರ ಸಾಕ್ಷಾತ್ಕಾರವನ್ನು ವಿಜ್ಞಾನವೆಂದೂ ಕರೆಯುವದುಂಟು. ತೈ. ೧-೯-ಭಾ.ಭಾ. ೫೩.

**ಜ್ಞಾನಕರ್ಮಸಮುಚ್ಚಯಃ :-** ಉಪಾಸನೆ ಮತ್ತು ಶಾಸ್ತ್ರೋಕ್ತಕರ್ಮ - ಇವುಗಳನ್ನು ಸೇರಿಸಿ ಅನುಷ್ಠಾನಮಾಡುವುದು, ಬೃ.ಭಾ. ೧-೪-೧.

**ಜ್ಞಾನಕಾಣ್ಡಮ್ :-** ವಸ್ತುರೂಪವಾದ ಆತ್ಮತತ್ತ್ವವನ್ನು ತಿಳಿಸುವ ವೇದಭಾಗ, ಉಪನಿಷತ್ತು .

**ಜ್ಞಾನದಾಹ್ಯಬೀಜಮ್ :-** ಬ್ರಹ್ಮವು ಜಗತ್ತಿಗೆ ಕಾರಣವೆಂದು ತಿಳಿಯುವ ಅಜ್ಞಾನ, ಅಥವಾ ಅವ್ಯಾಕೃತನಾಮರೂಪ, ಮಾಂ. ಕಾ. ಭಾ. ೧-೨ (ಭಾ.ಭಾ. ೨೪)

**ಜ್ಞಾನನಿಷ್ಠಾ :-** ಜ್ಞಾನವು ನೆಲೆನಿಲ್ಲುವದು; ಆತ್ಮೈಕತ್ವಜ್ಞಾನವು ಅಮಾನಿತ್ವಾದಿ ಸಾಧನಗಳ ಬಲದಿಂದ ಅನುಭವರೂಪದಿಂದ ನಿಲ್ಲುವದು, ೧೮-೫೫.

**ಜ್ಞಾನಪ್ರತಿಬನ್ಧಕಾರಣಮ್ :-** ಪದಾರ್ಥವಿವೇಕಕ್ಕೆ ಅಡ್ಡಿಯಾಗಿರುವ ಅಜ್ಞಾನ ಸಂಶಯವಿಪರ್ಯಯಗಳು, ಸೂ.ಭಾ. ೪-೧-೨.

**ಜ್ಞಾನಯೋಗಃ :-** ಸಾಂಖ್ಯರಿಗೆ ಉಚಿತವಾದ ಆತ್ಮಾನಾತ್ಮಜ್ಞಾನ, ಆತ್ಮನನ್ನು ಅರಿತು ಅದರಲ್ಲಿಯೇ ನಿಲ್ಲುವದು, ಗೀ. ಭಾ. ೩-೩.

**ಜ್ಞಾನಲಕ್ಷಣಾಭಕ್ತಿಃ:-** ಪರಮಾತ್ಮನನ್ನು ಅರಿತುಕೊಂಡು ಮಾಡುವ ಪ್ರೇಮವಾದ ನಾಲ್ಕನೆಯ ಭಕ್ತಿ, ಗೀ. ಭಾ. ೧೮-೫೪.

**ಜ್ಞಾನಶಕ್ತಿಃ :-** ಹಿರಣ್ಯಗರ್ಭನ ಮಿಗಿಲಿಲ್ಲದಿರುವ ಜ್ಞಾನದ ಶಕ್ತಿ; ಇವನು ಜ್ಞಾನಶಕ್ತಿಯಿಂದ ಹಿರಣ್ಯಗರ್ಭವೆಂದೂ ಕ್ರಿಯಾಶಕ್ತಿಯಿಂದ ಪ್ರಾಣ ಅಥವಾ ವಾಯುವೆಂದೂ ಎನಿಸುತ್ತಾನೆ. ಮುಂ. ಭಾ. ೧-೨-೨.

**ಜ್ಞಾನಾಙ್ಗಮ್ :-** ಜ್ಞಾನಕ್ಕಾಗಿ ಅವಶ್ಯವಾಗಿ ಮಾಡಬೇಕಾದದ್ದು. ಪರಮಹಂಸಪಾರಿವ್ರಾಜ್ಯವೆಂಬ ಸಂನ್ಯಾಸವೂ ಆತ್ಮಧ್ಯಾನವೂ ಜ್ಞಾನಕ್ಕೆ ಅಂಗವೆಂದು ಆಚಾರ್ಯರ ಅಭಿಪ್ರಾಯವಿದೆ. ಗೀ.ಭಾ.೩-೧ ಅವತರಣಿಕೆ; ೫-೨೭; ಬೃ.ಭಾ. ೨-೪, ಅವತರಣಿಕೆ; ಛಾಂ.ಭಾ.೭-೭-೧; ಸೂ.ಭಾ.೩-೪-೨೦.

**ಜ್ಞಾನಾಭ್ಯಾಸಃ** :- ಅಮಾನಿತ್ವವೇ ಮುಂತಾದ ಜ್ಞಾನಕಾರಣಗಳ ಅಭ್ಯಾಸ. ಸಂನ್ಯಾಸಿಗೆ ಪ್ರಧಾನಸಾಧನ. ಇದರ ಭಾವನೆಯು ಪರಿಪಕ್ವವಾದರೆ ಜ್ಞಾನವುಂಟಾಗುವದು. ಗೀ. ಭಾ. ೧೩-೧೦; ಸೂ.ಭಾ.೩-೪-೫೦.

**ಜ್ಞಾನೈಶ್ವರ್ಯಶಕ್ತಿಬಲವೀರ್ಯತೇಜಾಂಸಿ** :- ಭಗವಂತನಾದ ವಾಸುದೇವನಲ್ಲಿ ನಿತ್ಯವಾಗಿರುವ ಷಡ್ಗುಣಗಳು. ಗೀ.ಭಾ. ಅವತರಣಿಕೆ.

**ಜ್ಞಾಪಕಮ್** :- ತಿಳಿಸುವದು. ಶಾಸ್ತ್ರವು ಮಿಕ್ಕ ಪ್ರಮಾಣಗಳಂತೆ ಇದ್ದದ್ದನ್ನು ತಿಳಿಸುವದೇ ಹೊರತು ಕಾರಕವಲ್ಲ, ಇಲ್ಲದ್ದನ್ನು ಹೊಸದಾಗಿ ಉಂಟುಮಾಡುವದಲ್ಲ. ಗೀ.ಭಾ. ೩. ಅವತರಣಿಕೆ; ತೈ. ಭಾ. ೧-೧೧; ಬೃ.ಭಾ. ೨-೧-೨೦.

**ಜ್ಞೇಯಮ್** :- ಅರಿಯಲ್ಪಡತಕ್ಕದ್ದು. ಪರಮಾರ್ಥತತ್ತ್ವವು ವಿಷಯವಲ್ಲದಿದ್ದರೂ ಅಜ್ಞಾನದಿಂದ ಅದೇ ಜ್ಞೇಯವಾಗಿರುತ್ತದೆ. ವಿಶೇಷಗಳನ್ನು ಅಲ್ಲಗಳೆಯುವದರಿಂದಲೇ ಅದನ್ನು ಅರಿತುಕೊಳ್ಳಬೇಕು. ಗೀ. ಭಾ. ೧೩-೧೨ (ಭಾ.ಭಾ.೨೪೯)

## ತ

**ತತ್ತ್ವಮ್** :- ಸರ್ವಾತ್ಮಕವಾಗಿರುವ ಬ್ರಹ್ಮವು. ಗೀ. ಭಾ. ೨-೧೬

**ತತ್ತ್ವದರ್ಶನಮ್** :- ಬ್ರಹ್ಮಸ್ವರೂಪವನ್ನು ಅನುಭವಕ್ಕೆ ತಂದುಕೊಳ್ಳುವದು; ನಿತ್ಯವೂ ಪರಮಾತ್ಮನ ಅನುಸಂಧಾನದಲ್ಲಿರುವವರು ತತ್ತ್ವದರ್ಶಿಗಳು. ಗೀ. ಭಾ. ೨-೧೬, ೪-೩೪.

**ತತ್ತ್ವಾಗ್ರಹಣಮ್** :- ಪರಮಾರ್ಥವನ್ನು ತಿಳಿಯದೆ ಇರುವ ಕಾರಣಾಜ್ಞಾನ; ಇದು ಅನ್ಯಥಾಗ್ರಹಣರೂಪವಾದ ಕಾರ್ಯಜ್ಞಾನಕ್ಕೆ ಬೀಜ. ಮಾಂ. ಕಾ. ಭಾ. ೧-೧೧. ಇವೆರಡಕ್ಕಿಂತ ಬೇರೆಯಾಗಿರುವ ಮೂಲಾಜ್ಞಾನವೆಂಬ ತತ್ತ್ವವನ್ನು ಈಗಿನ ಅದ್ವೈತಿಗಳು ಒಪ್ಪಿರುತ್ತಾರೆ. ಇದಕ್ಕೆ ಭಾಷ್ಯದ ಆಧಾರವು ಕಾಣುವದಿಲ್ಲ.

**ತಪಃ** :- ಕೃಚ್ಛ್ರಚಾಂದ್ರಾಯಣಗಳೇ ಅಲ್ಲದೆ ದೇಹೇಂದ್ರಿಯ ಮನಸ್ಸುಗಳನ್ನು ವಿಕ್ಷೇಪವಿಲ್ಲದೆ ಇಟ್ಟುಕೊಳ್ಳುವದು (ಕೇ.ಭಾ. ೪-೮, ಭಾ.ಭಾ. ೮೬ ತೈ. ಭಾ. ೩-೧, ಭಾ.ಭಾ. ೨೩೦), ಜ್ಞಾನವು (ಮುಂ.೧-೧-೮) ಎಂಬರ್ಥಗಳಲ್ಲಿಯೂ ಈ ಶಬ್ದಕ್ಕೆ ಪ್ರಯೋಗವಿದೆ.

**ತಮಃ** :- ಅಜ್ಞಾನ, ಮಿಥ್ಯಾಪ್ರತ್ಯಯ, ತಪ್ಪುತಿಳಿವಳಿಕೆ ಗೀ. ಭಾ. ೧೦-೧೪

**ತರ್ಕಃ** :- ಪ್ರಮಾಣಕ್ಕೆ ಅನುಗ್ರಾಹಕವಾದ ಯುಕ್ತಿ. ಪ್ರಮಾಣವಿಲ್ಲದ ಶುಷ್ಕ

ತರ್ಕವು ನಿಲುಗಡೆಗೆ ಬರುವದಿಲ್ಲ. ಸೂ.ಭಾ. ೨-೧-೧೧. ಅನುಮಾನ ಪ್ರಮಾಣವನ್ನೂ ತರ್ಕವೆಂದೇ ಭಾಷ್ಯದಲ್ಲಿ ಎಣಿಸಿರುವದು ಕಂಡು ಬರುತ್ತದೆ. ೧-೧-೨.

**ತಾತ್ಪರ್ಯಮ್ :-** ಗುರೂಪಸತ್ತಿಯೇ ಮುಂತಾದವುಗಳಲ್ಲಿ ತತ್ಪರನಾಗಿರುವದು. ಬೃ.ಭಾ. ೪-೪-೨.

**ತಾದಾತ್ಮ್ಯಮ್ :-** ಅದೇ ಆಗಿರುವದು. ಜಗತ್ತಿಗೂ ಬ್ರಹ್ಮಕ್ಕೂ ತಾದಾತ್ಮ್ಯ ಸಂಬಂಧವಿದೆ ಎಂದರೆ ಜಗತ್ತು ನಿಜವಾಗಿ ಪರಮಾತ್ಮನೇ ಎಂದರ್ಥ. ಭೇದ ಸಹಿತಾಭೇದವೆಂಬ ಮೀಮಾಂಸಕರ ಅಭಿಪ್ರಾಯವಿಲ್ಲಿಲ್ಲ. ಸೂ.ಭಾ. ೨-೧-೧೮, ೨-೨-೩೮.

**ತಾರ್ಕಿಕಾಃ :-** ಶ್ರುತಿಗಿಂತಲೂ ತರ್ಕಕ್ಕೇ ಹೆಚ್ಚಿನ ಪ್ರಾದಾನ್ಯವನ್ನು ಕೊಟ್ಟಿರುವ ಸಾಂಖ್ಯ, ವೈಶೇಷಿಕ- ಮುಂತಾದವರು. ಸೂ.ಭಾ. ೧-೧-೧೦, ಮಾಂ. ಕಾ.ಭಾ. ೨-೩೫.

**ತಿಮಿರದೃಷ್ಟಿಃ, ತೈಮಿರಿಕಃ :-** ಕಣ್ಣುಪರೆ, ಕಣ್ಣುಪರೆಬಂದವನು. ಅವನಿಗೆ ಕಾಣುವ ಚಂದ್ರಾನೇಕತ್ವವು ಪರಮಾರ್ಥವಲ್ಲ. ಗೀ.ಭಾ. ೧೮-೧೬, ಕ.ಭಾ. ೨-೧-೧೧.

**ತುರೀಯಮ್ :-** ಎಚ್ಚರ, ಕನಸು, ತನಿನಿದ್ರೆ- ಎಂಬ ಅವಸ್ಥೆಗಳ ಅಪೇಕ್ಷೆಯಿಂದ ಬೇರೆಬೇರೆ ರೂಪದಲ್ಲಿ ಕಾಣುವ ಆತ್ಮತತ್ತ್ವವು ಅವಸ್ಥೆಗಳೆಂಬ ಉಪಾಧಿಗಳ ಹಂಗಿಲ್ಲದೆ ಇರುವ ಸ್ವರೂಪ, ಪರಮಾರ್ಥಾತ್ಮ. ಮಾಂ. ಭಾ. ೭. ತುರೀಯಾವಸ್ಥೆ, ತುರೀಯಾತೀತಾವಸ್ಥೆ ಎಂದು ಕೆಲವರು ವೇದಾಂತಿಗಳು ವ್ಯವಹರಿಸುವ ಅವಸ್ಥೆಗಳ ವಿಚಾರವು ಭಾಷ್ಯದಲ್ಲಿಲ್ಲ.

**ತ್ಯಕ್ತೈಷಣಃ :-** ಪುತ್ರ, ವಿತ್ತ, ಲೋಕ- ಇವುಗಳ ಬಯಕೆಯನ್ನು ಬಿಟ್ಟವನು. ಪುತ್ರನಿಂದ ಈ ಲೋಕವೂ ಮಾನುಷವಿತ್ತರೂಪವಾದ ಕರ್ಮದಿಂದ ಪಿತೃಲೋಕವೂ ದೈವವಿತ್ತವಾದ ಉಪಾಸನೆಯಿಂದ ದೇವಲೋಕವೂ ದೊರಕುವವೆಂದು ಶ್ರುತಿ. ಈ ಮೂರು ಬಯಕೆಯನ್ನೂ ಬಿಟ್ಟವನು ಸದ್ಯೋಮುಕ್ತಿಯನ್ನು ಕೊಡುವ ಆತ್ಮಜ್ಞಾನಕ್ಕೆ ಅಧಿಕಾರಿ. ಈ ಭಾ. ೫

**ತ್ಯಾಗಃ :-** ಬಿಡುವದು, ಕರ್ಮಫಲತ್ಯಾಗ ಗೀ. ಭಾ. ೧೮-೯; ಸರ್ವಕರ್ಮ ಸಂನ್ಯಾಸ, ಗೀ. ಭಾ. ೧೮-೧೧; ಎಲ್ಲಾ ಕರ್ಮಗಳನ್ನೂ ಬಿಡುವದು, ಜ್ಞಾನನಿಷ್ಠೆ, ಗೀ. ಭಾ. ೧೨-೧೨, ೧೮-೧೨.

**ತ್ರಿಕಾಲಾತೀತವಮ್ :-** ನಾಮರೂಪಪ್ರಪಂಚದ ಅವ್ಯಾಕೃತಸ್ಥಿತಿ, ಮಾಂ. ಭಾ. ೧.

**ತ್ರಿಗುಣಾತ್ಮಿಕಾ ಮಾಯಾ :-** ಮೂರು ಗುಣಗಳಿಂದಾಗಿರುವ, ಅವಿದ್ಯಾಕಲ್ಪಿತವಾದ ಪ್ರಕೃತಿ ಗೀ. ಭಾ. ಅವತರಣಿಕೆ ಭಾ.ಭಾ. ೨.

**ತ್ರಿವಿಧಮ್ ಆನನ್ತ್ಯಮ್ :-** ದೇಶದಿಂದಲಾಗಲಿ, ಕಾಲದಿಂದಲಾಗಲಿ, ಮತ್ತೊಂದು ವಸ್ತುವಿನಿಂದಲಾಗಲಿ ಅಂತವಿಲ್ಲದೆ ಇರುವದು, ತೈ.ಭಾ. ೨-೧.

**ತ್ರಿವೃತ್ಕರಣಮ್ :-** ತೇಜಸ್ಸು, ಅಪ್ಪು, ಅನ್ನ, - ಎಂಬ ಸೂಕ್ಷ್ಮಭೂತಗಳಲ್ಲಿ ಒಂದೊಂದರಲ್ಲಿಯೂ ಇನ್ನೆರಡನ್ನು ಬೆರಯಿಸಿ ಒಂದೊಂದು ಭೂತತ್ರಯ ರೂಪ ವಾಗಿರುವಂತೆ ಮಾಡುವದು, ಛಾಂ. ೬-೩-೩.

**ತ್ರೈಲೋಕ್ಯದೇಹೋಪಾಧಿಃ :-** ಮೂರು ಲೋಕಗಳ ರೂಪವಾಗಿರುವ ದೇಹವೆಂಬ ಉಪಾಧಿಯುಳ್ಳವನು, ವಿರಾಟ್ಪುರುಷ, ಪ್ರಜಾಪತಿ, ಮುಂ. ಭಾ. ೨-೧-೪.

## ದ

**ದಮ :-** ಹೊರಗಿನ ಕರಣಗಳನ್ನು ಬಿಗಿಹಿಡಿಯುವದು, ಭ.ಗೀ. ೧೬-೧.

**ದರ್ಶನಮ್ :-** ಜ್ಞಾನ ಉಪಾಸನೆ, ತೈ.ಭಾ. ೧-೧೦, ತೈ.ಭಾ. ೧-೩.

**ದರ್ಶನಾದರ್ಶನವೃತ್ತೀ :-** ಎರಡನೆಯ ವಸ್ತುವನ್ನು ಕಾಣುವ ದರ್ಶನವೃತ್ತಿ (ಕನಸು) ಕಾಣದ ಅದರ್ಶನವೃತ್ತಿ (ತನಿನಿದ್ರೆ)- ಎಂಬ ಎರಡು ರೂಪದ ನಿದ್ರೆಗಳು, ಮಾಂ. ಭಾ. ೫.

**ದೃಷ್ಟನಷ್ಟ :-** ತೋರಿಹಾರುವ, ಅಸತ್ಯವಾದ, ಗೀ.ಭಾ. ೧೫-೩ (ಭಾ.ಭಾ.೩೫೩); ಸೂ.ಭಾ.೨.೧.೧೪.

**ದೃಷ್ಟ:-** (೧) ಈ ಲೋಕದಲ್ಲಿ ಕಾಣುವ ಫಲ, ಪ್ರ..೧-೧೫; (೨) ಇಲ್ಲಿಯೇ ಅನುಭವಕ್ಕೆ ಬರುವ ಫಲವುಳ್ಳ ಜ್ಞಾನ, ಸೂ.ಭಾ. ೨-೧-೪ (೩) ಪ್ರತ್ಯಕ್ಷವಾಗಿ ಕಂಡದ್ದು, ಸೂ.ಭಾ.೨-೧-೪.

**ದೃಷ್ಟಾದೃಷ್ಟೇಷ್ಟವಿಷಯಾಃ :-** ಈ ಲೋಕದಲ್ಲಿ ಅನುಭವಿಸಬಹುದಾದ, ಮತ್ತು ಪರಲೋಕದಲ್ಲಿ ಅನುಭವಿಸಬೇಕಾಗಿರುವ, ಇಷ್ಟವಿಷಯಗಳು, ಮುಂ.ಭಾ. ೩-೨-೨.

**ದೇವತಾತ್ಮಗಮನಮ್, ದೇವತಾತ್ಮಭಾವ :-** ದೇವತೆಯೇ ತಾನಾಗಿ ಬಿಡುವದು, ಈ.ಭಾ. ೧೧.

**ದೇವತಾಪ್ಯಯಃ :-** ದೇವತೆಗಳಲ್ಲಿ ಒಂದಾಗಿಬಿಡುವದು, ಐ.ಭಾ. ೧-೧ (ಭಾ. ಭಾ. ೩೭).

**ದೇಹಾತ್ಮಭಾವಃ :-** ದೇಹವೇ ತಾನೆಂಬ ಅರಿವು, ಮುಂ.ಭಾ. ೨-೧-೨.

**ದೇಹಾದಿಸಙ್ಘಾತಃ, ದೇಹೇನ್ದ್ರಿಯಸಙ್ಘಾತಃ :-** ಶರೀರ, ಇಂದ್ರಿಯಗಳು- ಇವೆರಡೂ ಒಂದರೊಡನೊಂದು ಸೇರಿಕೊಂಡು ಆತ್ಮನಿಗಾಗಿ ಕೆಲಸ ಮಾಡುವ ಗುಂಪು, ಮಾಂ. ಕಾ. ಭಾ. ೩-೪.

**ದೈವಂ ವಿತ್ತಮ್ :-** ಉಪಾಸನೆ, ದೇವತ್ವವನ್ನು ಕೊಡುವ ಸಾಧನ, ಈ.೧೩.

**ದ್ವಂದ್ವಾನಿ :-** ಸುಖದುಃಖಕ್ಕೆ ಕಾರಣವಾಗಿ ಪರಸ್ಪರವಿರುದ್ಧವಾದ ಪದಾರ್ಥಗಳು, ಗೀ. ಭಾ. ೧೯.

**ದ್ವಾದಶಕರಣಾನಿ :-** ಹತ್ತು ಇಂದ್ರಿಯಗಳು, ಮನಸ್ಸು, ಬುದ್ಧಿ- ಎಂಬ ಹನ್ನೆರಡು ಕರಣಗಳು, ಗೀ. ಭಾ. ೧೮-೪೮.

**ದ್ವಿಚನ್ದ್ರಾದಿಃ :-** ದೋಷದಿಂದ ಕಾಣುವ ಇಬ್ಬರು ಚಂದ್ರರೇ ಮುಂತಾದ ಹುಸಿತೋರಿಕೆ,ಎ ೧೮-೪೮. (ಭಾ. ಭಾ. ೫೫೦).

**ದರ್ಶನಮ್ :-** ಜ್ಞಾನ; ಆರ್ಷದರ್ಶನವೆಂದರೆ ಧರ್ಮಾನುಷ್ಠಾನದಿಂದಾಗುವ ಸಿದ್ಧಿರೂಪವಾದ ಅತೀಂದ್ರಿಯಜ್ಞಾನ.

**ದ್ರಷ್ಟಾ :-** ನೋಡುವ ಸಾಕ್ಷಿ; ಒಂದು ದೇಹದಲ್ಲಿ ಇಬ್ಬರು ದ್ರಷ್ಟೃಗಳು ಇರಲಾರರು. ಸೂ.ಭಾ. ೧-೨-೨.

**ದೃಷ್ಟಿಶ್ರುತಿಮತಿವಿಜ್ಞಾತಯಃ :-** ಜೀವನ ನೋಡುವಿಕೆ, ಕೇಳುವಿಕೆ, ಮನನಮಾಡುವಿಕೆ ಮುಂತಾದ ಧರ್ಮಗಳು; ಅಂತಃಕರಣದ ವೃತ್ತಿಯಲ್ಲದೆ ಆತ್ಮನ ನಿತ್ಯಸ್ವರೂಪವೇ ಆಗಿರುವ ದೃಷ್ಟ್ಯಾದಿಗಳೂ ಇವೆ. ಬೃ. ಭಾ. ೧-೪-೧೦.

**ದೇಹೇನ್ದ್ರಿಯಮನೋಬುದ್ಧ್ಯುಪಾಧಯಃ :-** ಆತ್ಮನನ್ನು ಅರಿಯುವದಕ್ಕೆ ಸಾಧಕವಾಗಿರುವ ಆತ್ಮನ ಸ್ವರೂಪದಲ್ಲಿ ಸೇರದೆ ಇರುವ ಸುತ್ತುಗಟ್ಟುಗಳು, ಇವುಗಳಿಂದ ಆತ್ಮನು ಪರಿಚ್ಛಿನ್ನನಾಗಿರುವಂತೆ ಕಾಣುತ್ತಾನೆ, ಸೂ.ಭಾ. ೧-೨-೬.

**ದ್ವೈತಲಕ್ಷಣಾ ಅವಿದ್ಯಾ :-** ದ್ವೈತವನ್ನು ತಿಳಿಸುವ ತಪ್ಪುತಿಳಿವಳಿಕೆ, ಸೂ.ಭಾ. ೧-೩-೧೯.

## ಧ

**ಧರ್ಮಃ :-** (೧) ಪುಣ್ಯ (೨) ವಸ್ತುವಿನ ವಿಶೇಷಣ (೩) ಜೀವ ಕ. ಭಾ. ೧-೧-೨೧ (ಭಾ.ಭಾ. ೩೫).

**ಧರ್ಮಜ್ಞಾನವೈರಾಗ್ಯೈಶ್ವರ್ಯಾಣಿ :-** ಹಿರಣ್ಯಗರ್ಭನಲ್ಲಿ ಎಲ್ಲರಿಗಿಂತಲೂ ಮಿಗಿಲಾಗಿರುವ ಧರ್ಮಾದಿಗಳು, ಮುಂ. ಭಾ. ೧-೧-೧.

**ಧಾಮಾನಿ :-** ಅವಸ್ಥೆಗಳು, ಮಾಂ. ಕಾ. ಭಾ. ೧-೫.

**ಧಾರಣಾಯೋಗಃ :-** ಸಗುಣಬ್ರಹ್ಮವನ್ನು ಉಪಾಸನೆಮಾಡುವದು, ಸ್ಥಾನ ವಿಶೇಷದಲ್ಲಿ ಪ್ರಾಣಧಾರಣೆಯನ್ನು ಮಾಡುವದು, ಗೀ.ಭಾ. ೯ರ ಅವತರಣಿಕೆ.

**ಧೂಮಾದಿಕ್ರಮಃ :-** ಸಕಾಮರಾದವರು ಕರ್ಮಫಲವನ್ನು ಪಡೆಯುವದಕ್ಕೆ ಸತ್ತ ಬಳಿಕ ಹೋಗುವ ದಕ್ಷಿಣಮಾರ್ಗದ ಕ್ರಮ ಐ.ಭಾ. ೨-೧ (ಭಾ.ಭಾ. ೭೪)

**ಧೃತಿಃ :-** ಕುಸಿದುಬೀಳುವ ಶರೀರೇಂದ್ರಿಯಗಳನ್ನು ಹಿಡಿದೆತ್ತುವ ಮನಸ್ಸಿನ ಶಕ್ತಿವಿಶೇಷ. ಗೀ.ಭಾ. ೧೩-೬.

**ಧ್ಯಾನಮ್ :-** (೧) ಭಾವನೆ, ಉಪಾಸನೆ, (೨) ತತ್ತ್ವದರ್ಶನಕ್ಕೆ ಉಪಾಯವಾದ ಏಕಾಗ್ರತೆಯಿಂದ ಕೂಡಿದ ಚಿಂತನ, ನಿಧಿಧ್ಯಾಸನ.

## ನ

**ನಾನಾರಸಃ, ಅನೇಕರಸಃ :-** ಮರ, ಸಮುದ್ರ ಮುಂತಾದವುಗಳಂತೆ ಸ್ವಗತಭೇದವುಳ್ಳ; 'ಏಕರಸ'ವೆಂಬುದಕ್ಕೆ ವಿರುದ್ಧ. ಬ್ರಹ್ಮವು ಅನೇಕಾತ್ಮಕವೆಂಬ ಭರ್ತೃಪ್ರಪಂಚಾದಿಗಳ ಮತವನ್ನು ವರ್ಣಿಸುವದಕ್ಕೆ ಭಾಷ್ಯಕಾರರು ಉಪಯೋಗಿಸಿದ ಶಬ್ದವಿದು, ಸೂ.ಭಾ. ೧-೩-೧, ೧-೩-೧೪.

**ನಾಮರೂಪಕರ್ಮಾಣಿ :-** ಜಗತ್ತು ತೋರುವ ಮೂರು ಬಗೆಗಳು, ಐ.ಭಾ. (ಭಾ. ಭಾ. ೨೮). ಆತ್ಮನು ನಾಮರೂಪಕರ್ಮಗಳ ಸಂಬಂಧವಿಲ್ಲದವನೆಂದು ತಿಳಿಸುವದಕ್ಕೆ ವ್ಯಾಕೃತಾವ್ಯಾಕೃತಪ್ರಪಂಚವನ್ನು ನಾಮರೂಪಕರ್ಮಗಳೆಂದು ವಿಂಗಡಿಸುವರು.

**ನಾಮರೂಪೇ :-** ನಾಮರೂಪಕರ್ಮಗಳನ್ನು ಸಂಕ್ಷೇಪವಾಗಿ ನಾಮರೂಪ ಗಳೆಂದು ಹೇಳಿರುವದುಂಟು; ಆಗ ರೂಪದಲ್ಲಿಯೇ ಕರ್ಮವೂ ಅಡಕವಾಗಿರುವದು, ಇವು ಈಶ್ವರನ ಸ್ವರೂಪವೆಂದಾಗಲಿ ಭಿನ್ನವೆಂದಾಗಲಿ ನಿರ್ವಚನಮಾಡುವದಕ್ಕಾಗದ ಅಸತ್ಪದಾರ್ಥ. ಸೂ. ಭಾ. ೨-೧-೧೪. ಇವೂ ಅವಿದ್ಯಾಕಲ್ಪಿತ, ಸೂ. ಭಾ. ೨-೧-೧೪.

**ನಾಮರೂಪಬೀಜಭೂತ :-** ನಾಮರೂಪಗಳ ಕಾರಣವಾದ ಅವ್ಯಾಕೃತ, ಮುಂ. ಭಾ. ೨-೧-೨ (ಭಾ.ಭಾ. ೫೨), ವ್ಯಾಕೃತಾವ್ಯಾಕೃತಗಳೆರಡೂ ಅವಿದ್ಯಾಕೃತ, ಸೂ.ಭಾ. ೨-೧-೨೭.

**ನಾಮರೂಪಬೀಜೋಪಲಕ್ಷಿತ** :- ಅವ್ಯಾಕೃತದಿಂದ ಕಾರಣವೆಂದು ತಿಳಿಯಬೇಕಾಗಿರುವ ಬ್ರಹ್ಮ, ಮುಂ. ಭಾ. ೨-೧-೩ (ಭಾ. ಭಾ. ೫೭)

**ನಾಮರೂಪೋಪಾಧ್ಯನುರೋಧೀ** :- ನಾಮರೂಪಗಳೆಂಬ ಉಪಾಧಿಯನ್ನು ಅನುಸರಿಸುವ ಬ್ರಹ್ಮ, ಈಶ್ವರತ್ವವು ಈ ಉಪಾಧಿಯಿಂದ. ಸೂ. ಭಾ. ೨-೧-೪.

**ನಾರಾಯಣ** :- ಅವ್ಯಕ್ತಕ್ಕಿಂತಲೂ ಪರನಾದ ಭಗವಂತ, ಗೀ. ಭಾ. ಅವ. ಶ್ಲೋಕ, ಸೂ. ಭಾ. ೨-೨-೪೨; ಸೂತ್ರಾತ್ಮನನ್ನು ನಿಯಮನ ಮಾಡಿಕೊಂಡಿರುವ ಅಂತರ್ಯಾಮಿ, ಬೃ. ೩-೭-೩.

**ನಿತ್ಯದೃಕ್ಸ್ವರೂಪಃ** :- ಯಾವಾಗಲೂ ಇರುವ ಚೈತನ್ಯಸ್ವರೂಪನಾದ ಪರಮಾತ್ಮ, ಸೂ. ಭಾ. ೧-೩-೧೯.

**ನಿತ್ಯಶುದ್ಧಬುದ್ಧಮುಕ್ತಸ್ವಭಾವಃ** :- ಅನಾತ್ಮಸಂಬಂಧವು ಎಂದಿಗೂ ಇಲ್ಲದ, ನಿತ್ಯಚೈತನ್ಯನಾದ, ನಿತ್ಯಮುಕ್ತನಾದ ಪರಮಾತ್ಮ, ಮುಂ. ಭಾ. ೩-೧-೧, ಮುಂ. ಕಾ. ಭಾ. ೩-೧೫, ಗೀ. ಭಾ. ೧೫-೧೭.

**ನಿತ್ಯಸಾಕ್ಷೀ** :- ಯಾವಾಗಲೂ ಒಂದೇ ರೂಪದಲ್ಲಿದ್ದುಕೊಂಡು ಎಲ್ಲವನ್ನೂ ನೋಡುತ್ತಿರುವ, ಮನಸ್ಸಿನಂತೆ ವಿಷಯಾಕಾರವಾಗಿ ಪರಿಣಮಿಸದೆ ಅರಿಯುತ್ತಿರುವ ಚೈತನ್ಯ, ಮುಂ. ಭಾ. ೩-೧-೧.

**ನಿತ್ಯವಿಜ್ಞಪ್ತಿಸ್ವರೂಪಃ, ನಿತ್ಯವಿಜ್ಞಾನರೂಪಃ, ನಿತ್ಯಾವಗತಿಸ್ವರೂಪಃ** :- ನಿತ್ಯವಾದ ಚೈತನ್ಯಸ್ವರೂಪನಾದ ಆತ್ಮ, ಉಪ. ಪ. ೧೩-೫, ೧೮-೧.

**ನಿದಿಧ್ಯಾಸನಮ್** :- ಏಕಾಗ್ರಚಿತ್ತದಿಂದ ಚಿಂತಿಸಿ ತಿಳಿಯುವದು. ಧ್ಯಾನ ಶಬ್ದದಿಂದಲೂ ಇದನ್ನು ಕರೆಯುವದುಂಟು; ಆದರೆ ಇದು ಭಾವನಾ ರೂಪವಾದ ಉಪಾಸನೆಯಲ್ಲ. ಉಪಾಸನೆಗೆ ಪರೋಕ್ಷಫಲ, ನಿದಿಧ್ಯಾಸನಕ್ಕೆ ದೃಷ್ಟವಾದ ಜ್ಞಾನವೇ ಫಲ. ನಿಧಿಧ್ಯಾಸನವನ್ನು ಉಪಾಸನೆ ಎಂದೂ ಕರೆದಿರುವದುಂಟು, ಸೂ.ಭಾ. ೧-೧-೪, ೪-೧-೧, ೪-೧-೧೨.

**ನಿಮಿತ್ತಕಾರಣಮ್** :- ಉಪಾದಾನವಲ್ಲದ ಕಾರಣ, ಮಣ್ಣಿಗೆ ಕುಂಬಾರನಂತೆ ಅಧಿಷ್ಠಾತೃವಾಗಿರುವ ಕರ್ತೃ; ಪರಮಾತ್ಮನು ಜಗತ್ತಿಗೆ ನಿಮಿತ್ತವೂ ಉಪಾದಾನವೂ ಆಗಿರುತ್ತಾನೆ ಎಂಬುದೇ ವೇದಾಂತ ಸಿದ್ಧಾಂತವು. ಸೂ. ಭಾ. ೧-೪-೨೩.

**ನಿಮಿತ್ತನೈಮಿತ್ತಿಕತ್ವಮ್** :- ನಿರಂತರವಾಗಿ ಒಂದಿದ್ದರೆ ಮತ್ತೊಂದಾಗುವದು, ಕಾರ್ಯಕಾರಣಭಾವವಿಲ್ಲದ ನೈರಂತರ್ಯ, ಛಾಂ. ೬-೨-೨.

**ನಿಯೋಗ :-** ಶಾಸ್ತ್ರವು ಹೀಗೆ ಮಾಡೆಂದು ಪುರುಷನನ್ನು ಕಟ್ಟುಮಾಡುವದು. ಬ್ರಹ್ಮಜ್ಞಾನವು ನಿಯೋಗವಿಷಯವಲ್ಲ, ಸುಮ್ಮನೆ ವಸ್ತುವನ್ನು ಉಪದೇಶಿಸುತ್ತದೆ- ಎಂಬುದು ಆಚಾರ್ಯರ ಮತ, ಸೂ. ಭಾ. ೧-೧-೪, ೩-೨-೨೧.

**ನಿರಞ್ಜನಜ್ಞಾನಸ್ವರೂಪಃ :-** ಯಾವದರ ಅಂಟೂ ಇಲ್ಲದ ಜ್ಞಾನಸ್ವರೂಪನಾದ ವಾಸುದೇವ, ೨-೨-೪೨.

**ನಿರತಿಶಯೋಪಾಧಿಸಂಪನ್ನಃ :-** ಎಲ್ಲಕ್ಕೂ ಹೆಚ್ಚಿನ ಉತ್ತಮವಾದ ಉಪಾಧಿಯಿಂದ ಕೂಡಿದ ಈಶ್ವರನು, ಜೀವರನ್ನು ಆಳುವವನು, ಸೂ. ಭಾ. ೨-೩-೪೫.

**ನಿರಧಿಷ್ಠಾನ :-** ಶರೀರವಿಲ್ಲದ ಈಶ್ವರ; ಅಧ್ಯಾರೋಪಕ್ಕೆ ಆಸ್ಪದವಾದದ್ದನ್ನು ಅಧಿಷ್ಠಾನವೆಂದು ಭಾಷ್ಯದಲ್ಲಿ ವ್ಯವಹರಿಸಿಲ್ಲ. ಸೂ. ೨-೨-೪೦.

**ನಿರನ್ವಯನಾಶ :-** ವಸ್ತು ಮತ್ತೊಂದು ರೂಪದಲ್ಲಿ ಅನುಗತವಾಗದ ನಾಶ; ಬೌದ್ಧಾದಿಗಳು ಒಪ್ಪುವ ನಾಶವಿದು. ಮಡಕೆಯು ನಾಶವಾದರೂ ಮಣ್ಣಿನ ರೂಪದಿಂದ ಅನುಗತವಾಗಿಯೇ ಇರುತ್ತದೆ.; ಇದರಂತೆ ನಾಶವೆಂದರೆ ಯಾವದಾದರೊಂದು ರೂಪದಿಂದ ಅವಸ್ಥಾಂತರದಲ್ಲಿ ಅನುಗತವಾಗಿರುವದು ಎಂಬುದು ವೇದಾಂತಿಗಳ ಮತವು. ಸೂ. ಭಾ. ೨-೨-೨೨.

**ನಿರಸ್ತೋಪಾಧಿಸಂಬನ್ಧ, ನಿರುಪಾಧಿಕ :-** ಯಾವ ಉಪಾಧಿಯ ಹಂಗೂ ಇಲ್ಲದ ಬ್ರಹ್ಮ; ಇದೇ ಬ್ರಹ್ಮದ ಪರಮಾರ್ಥರೂಪವು, ಸೂ. ಭಾ. ೧-೧-೧೨.

**ನಿರಾತ್ಮವಾದ :-** ಜಗತ್ತಿಗಾಗಲಿ ಜೀವರಿಗಾಗಲಿ ಯಾವ ಶಾಶ್ವತವಾದ ತಿರುಳೂ ಇಲ್ಲವೆಂಬ ಬೌದ್ಧರ ವಾದ, ಉಪ. ಪದ್ಯ , ೧೬-೬೮, ಮಾಂ. ಕಾ. ಭಾ. ೩-೧೦.

**ನಿರಾಬಾಧ, ಅನಾಬಾಧ :-** ಬಾಧಿತವಾಗದ, ಸಹಜವಾಗಿರುವ ಸ್ವರೂಪಸುಖ, ಪ್ರ.ಭಾ. ೪-೧, ೪-೬.

**ನಿರಾಸ್ಪದ, ನಿರ್ನಿಮಿತ್ತ :-** ಆಶ್ರಯವಿಲ್ಲದ ಕಲ್ಪನೆ, ಹಗ್ಗವು ಹಾವಿಗೂ ಕಪ್ಪೆಯಚಿಪ್ಪು ಬೆಳ್ಳಿಗೂ ಆಸ್ಪದವು; ಈಗಿನವರು ಇದನ್ನು 'ನಿರಧಿಷ್ಠಾನ' ವೆನ್ನುವರು, ಮುಂ. ಭಾ. ೨-೩೨, ಮುಂ. ಭಾ. ೪.

**ನಿರುಪಾಖ್ಯ :-** ಯಾವದೊಂದು ಗೊತ್ತಾದ ರೂಪದಿಂದಲೂ ತಿಳಿಸಲಾಗದ, ಸೋಪಾಖ್ಯವಲ್ಲದ. ಬೃಹ. ಬೃ. ಭಾ. ೨೩-೧; ಅವಸ್ತು. ಸೂ. ಭಾ. ೨-೨-೨೪.

**ನಿರೇಷಣಾಃ :-** ಪುತ್ರಾದಿಗಳ ಬಯಕೆಯಿಲ್ಲದ, ವಿರಕ್ತವಾದ, ತೈ. ಭಾ.೨-೯.

**ನಿರೋಧ :-** ನಾಶ, ಪ್ರಲಯ, ಗೌ. ಕಾ. ಭಾ. ೨-೩೨.

**ನಿರ್ವಿಕಲ್ಪ :-** ಅದು, ಇದು- ಎಂದು ವಿಕಲ್ಪಿಸಲಾಗದ (ಬ್ರಹ್ಮ).

**ನಿರ್ವಿಶೇಷ :-** ಇಂಥದ್ದು, ಅಂಥದ್ದು - ಎಂಬ ವಿಶೇಷವಿಲ್ಲದ (ಬ್ರಹ್ಮ).

**ನಿವೃತ್ತಿಲಕ್ಷಣ :-** ಜ್ಞಾನ, ವೈರಾಗ್ಯಸ್ವರೂಪವಾದ (ಧರ್ಮ), ಗೀ.ಭಾ.ಭಾ. ೧

**ನಿಷ್ಕ್ರಿಯಾತ್ಮ :-** ಯಾವ ಕ್ರಿಯೆಯೂ ಇಲ್ಲದ ಆತ್ಮ, ಗೀ. ಭಾ. ೫, ಅವ.

**ನೈಸರ್ಗಿಕ :-** ಮನುಷ್ಯನ ಸ್ವಭಾವದಿಂದಲೇ ಇದ್ದುಕೊಂಡಿರುವ ಅವಿದ್ಯಕ ವ್ಯವಹಾರವೇ ಮುಂತಾದದ್ದು; ಆಗುಂತಕವಲ್ಲ.

## ಪ

**ಪಞ್ಚಕೋಶಾಃ :-** ತೈತ್ತಿರೀಯದಲ್ಲಿ ಹೇಳಿರುವ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ - ಎಂಬ ಐದುಕೋಶಗಳು. ಆನಂದಮಯವೆಂಬ ಐದನೆಯ ಕೋಶವನ್ನು ಆಚಾರ್ಯರ ಹಿಂದಿನ ವೃತ್ತಿಕಾರರು ಒಪ್ಪಿರಲಿಲ್ಲ. ತೈ. ಭಾ. ೨-೪ ಮತ್ತು ಸೂ. ಭಾ. ೧-೧-೨ನ್ನು ನೋಡಿ.

**ಪಞ್ಚೀಕರಣಮ್ :-** ಐದು ಭೂತಗಳನ್ನು ಒಂದೊಂದರಲ್ಲಿ ಮಿಕ್ಕ ನಾಲ್ಕನ್ನೂ ಬೆರೆಯಿಸಿ ಸ್ಥೂಲಭೂತಗಳಾಗಿ ಮಾಡುವುದು. ಛಾಂದೋಗ್ಯದಲ್ಲಿ ಹೇಳಿರುವ ತ್ರಿವೃತ್ಕರಣವು ಇದಕ್ಕೆ ಉಪಲಕ್ಷಣವೆಂದು ಭಾಷ್ಯಕಾರರ ಮತ, ಛಾಂ. ಭಾ. ೬-೪-೪.

**ಪಣ್ಡಿತ :** :- ತಿಳಿದವನು, ಆತ್ಮಜ್ಞಾನಿ, ಗೀ. ಭಾ. ೨-೧೧.

**ಪದಸಮನ್ವಯಃ :-** ವಾಕ್ಯದಲ್ಲಿರುವ ಪದಗಳ ಸಂಬಂಧವು ವಿಹಿತ ಕ್ರಿಯಾವಾಚಕಪದದಲ್ಲಿಯೇ ಇರಬೇಕೆಂಬ ಮೀಮಾಂಸಕರ ಪಕ್ಷವನ್ನು ಖಂಡಿಸಿ ಬ್ರಹ್ಮಸ್ವರೂಪವನ್ನೂ ವಸ್ತುಮಾತ್ರವನ್ನೂ ತಿಳಿಸುವದರಲ್ಲಿಯೂ ವೇದಾಂತ ವಾಕ್ಯಗಳು ಸಮನ್ವಿತವಾಗಿರುವವೆಂದು ಆಚಾರ್ಯರು ತೋರಿಸಿರುತ್ತಾರೆ, ಸೂ. ಭಾ. ೧-೧-೪.

**ಪದಾರ್ಥಃ :-** ವಾಕ್ಯದಲ್ಲಿ ಪದಗಳ ಅರ್ಥದ ಜ್ಞಾನವು ವಾಕ್ಯಾರ್ಥ ಜ್ಞಾನಕ್ಕೆ ಹೇತುವಾಗಿರುವದರಿಂದ 'ತತ್ತ್ವಮಸಿ' ಮುಂತಾದ ವಾಕ್ಯಗಳ ಜ್ಞಾನವಾಗದೆ ಇರುವದಕ್ಕೆ ತತ್, ತ್ವಂ- ಎಂಬ ಪದಗಳ ಅರ್ಥದ ಜ್ಞಾನವಾಗದೆ ಇರುವದೇ ಕಾರಣವೆಂದು ಆಚಾರ್ಯರ ಮತ, ಸೂ.ಭಾ. ೪-೧-೨.

**ಪರಃ ಪುರುಷಾರ್ಥಃ, ಪರಂ ನಿಃಶ್ರೇಯಸಮ್, ಪರಮನಿಃಶ್ರೇಯಸಮ್ :-** ಎಲ್ಲಕ್ಕೂ ಹೆಚ್ಚಿನ ಪುರುಷಾರ್ಥ, ಮೋಕ್ಷ, ಗೀ. ಭಾ. ಭಾ. ೪, ೨-೪೩, ೧೮-೬೬ (ಸೂ. ಭಾ. ಭಾ. ೫೮೪).

**ಪರಮಗುರುಃ :-** ಎಲ್ಲರಿಗೂ ಗುರುವಾದ ವಾಸುದೇವ, ಗೀ. ಭಾ. ೧೮-೬೮.

**ಪರಮಹಂಸಪರಿವ್ರಾಜಕಃ :-** ಸರ್ವಕರ್ಮಸಂನ್ಯಾಸವನ್ನು ಮಾಡಿದ ತುರೀಯಾಶ್ರಮದವನು, ಗೀ. ಭಾ. ೩-೩.

**ಪರಮಾತ್ಮಾ** :- ಎಲ್ಲಕ್ಕೂ ಹೆಚ್ಚಿನ ಮುಖ್ಯಾತ್ಮ, ಎಲ್ಲರಿಗೂ ಆತ್ಮ, ಗೀ. ಭಾ. ೧೩-೨೨.

**ಪರಮಾರ್ಥಃ** :- ಒಂದೇ ರೂಪವಾಗಿ, ತನ್ನ ಸ್ವರೂಪವನ್ನು ಮಾರ್ಪಡಿಸದೆ ಇರುವ ವಸ್ತು, ಹುಸಿತೋರಿಕೆಯಲ್ಲ, ಸೂ. ಭಾ. ೨-೧-೧೧.

**ಪರಮಾರ್ಥದರ್ಶನಮ್** :- ನಿಜವಾದ ತಿಳಿವಳಿಕೆ. ಇದನ್ನೇ ಪರಮಾರ್ಥಜ್ಞಾನ, ಪರಮಾರ್ಥವಸ್ತುವಿವೇಕ, ಸಮ್ಯಗ್ಜ್ಞಾನ- ಎಂದು ಕರೆಯುವದು. ಅದ್ವೈತಜ್ಞಾನವು ಮಾತ್ರ ಪರಮಾರ್ಥದರ್ಶನವೆಂದೂ ಮಿಕ್ಕದ್ದೆಲ್ಲ ಭ್ರಾಂತವೆಂದೂ ಆಚಾರ್ಯರ ಅಭಿಪ್ರಾಯ.

**ಪರಮಾರ್ಥನಿರಹಙ್ಕಾರಃ** :- ನಿಜವಾಗಿಯೂ ಅಹಂಕಾರವಿಲ್ಲದವನು, ಸಾತ್ವಿಕನಾಗಿರುವ ನಿಗರ್ವಿಯಲ್ಲ; ಯಾವ ಕರ್ಮವೂ ಅಹಂಕಾರವೆಂಬ ಕಾರಣವಿಲ್ಲದೆ ಆಗುವದಿಲ್ಲ. ಗೀ. ಭಾ. ೧೮-೨೪.

**ಪರಮಾರ್ಥಯೋಗಃ** :- ನಿಜವಾದ ಯೋಗ, ಜ್ಞಾನ. ಕರ್ಮಯೋಗ, ಧ್ಯಾನಯೋಗ- ಮುಂತಾದವುಗಳೆಲ್ಲ ಗೌಣಯೋಗಗಳು; ಏಕೆಂದರೆ ಅವುಗಳಲ್ಲಿ ಚಿತ್ತಸಮಾಧಾನವೆಂಬ ಗುಣವಿರುತ್ತದೆ. ಗೀ. ಭಾ. ೪ರ ಅವತರಣಿಕೆಯನ್ನು ನೋಡಿ.

**ಪರಮಾರ್ಥಸಂನ್ಯಾಸಃ** :- ನಿಜವಾದ ಸರ್ವಕರ್ಮಸಂನ್ಯಾಸ, ಫಲ ತ್ಯಾಗ ರೂಪವಾದ ಸಂನ್ಯಾಸವಲ್ಲ.

**ಪರಮಾರ್ಥಸಾಂಖ್ಯದರ್ಶನವ್** :- ನಿಜವಾಗಿರುವ ಸಾಂಖ್ಯಜ್ಞಾನ, ವೇದಾಂತ, ಗೀ. ಭಾ. ೧೩-೩೧.

**ಪರಮಾರ್ಥಾತ್ಮಾ** :- ನಿಜವಾಗಿಯೂ ಆತ್ಮ, ಅವಿದ್ಯೆಯಿಂದ ಕಲ್ಪಿತನಾದ ಆತ್ಮನಲ್ಲ, ಗೀ. ಭಾ. ೧೩-೨೮.

**ಪರಮಾರ್ಥಾವಸ್ಥಾ** :- ಅವಿದ್ಯಾಕಲ್ಪಿತವಲ್ಲದ ನಿಜವಾದ ಸ್ಥಿತಿ, ವ್ಯವಹಾರವಸ್ಥೆಯಲ್ಲ. ಸೂ. ಭಾ. ೨-೧-೧೪.

**ಪರಂ ಬ್ರಹ್ಮ, ಪರಮಂ ಬ್ರಹ್ಮ** :- ಎಲ್ಲಕ್ಕೂ ಹೆಚ್ಚಿನ ಪರಮಾರ್ಥ; ಪರಮಾತ್ಮ. ಹಿರಣ್ಯಗರ್ಭನೆಂಬ ಅಪರಬ್ರಹ್ಮದ ಅಪೇಕ್ಷೆಯಿಂದ ಇದನ್ನು ಪರ, ಮುಖ್ಯ, ಕಾರಣ- ಎಂಬ ವಿಶೇಷಣಗಳಿಂದ ಕರೆಯುವರು. ಸೂ. ಭಾ. ೪.೩-೭.

**ಪರಾ ಭಕ್ತಿ** :- ಪರಮಾತ್ಮಜ್ಞಾನವು ಆತ್ಮನ ನಿರತಿಶಯಪ್ರೇಮದಲ್ಲಿ ಕೊನೆಗಾಣುವದರಿಂದ ಅದನ್ನು ಪರ ಎಂದರೆ ಹೆಚ್ಚಿನ ಭಕ್ತಿ ಎಂದು ಗೀತೆಯಲ್ಲಿ ಕರೆದಿದೆ. ಇದೇ ಜ್ಞಾನನಿಷ್ಠೆ, ಗೀ. ಭಾ. ೧೫-೫೪, ೫೫.

**ಪರಿಣಾಮಪ್ರಕ್ರಿಯಾ** :- ವಸ್ತುವು ವಿಕಾರವನ್ನು ಹೊಂದಿ ರೂಪಾಂತರವಾಗುವದೆಂದು ಪ್ರತಿಪಾದಿಸುವ ಪ್ರಕಾರ. ಬ್ರಹ್ಮವು ಪ್ರಧಾನದಂತೆ ಪರಿಣಾಮವನ್ನು ಹೊಂದುವದಿಲ್ಲವಾದರೂ ಉಪಾಧಿಯ ವಶದಿಂದ ಆಗುವ ಅವಿದ್ಯಕ ಪರಿಣಾಮವನ್ನೇ ಉಪಾಸನೆಗೋಸ್ಕರ ಒಪ್ಪಿರುತ್ತದೆ. ಸೂ. ಭಾ. ೧-೪-೨೬, ೨-೧-೧೪.

**ಪರಿನಿಷ್ಠಿತ, ಪರಿನಿಷ್ಪನ್ನ** :- ಸಿದ್ಧವಾದ, ಕ್ರಿಯೆಯಿಂದ ಸಾಧ್ಯವಲ್ಲದ. ಸೂ. ಭಾ. ೧-೧-೫, ೨-೧-೪.

**ಪರಿಪೂರ್ಣಶಕ್ತಿಕ** :- ಎಲ್ಲಾ ಕಾರ್ಯಗಳನ್ನೂ ಉಂಟುಮಾಡುವದಕ್ಕೆ ತಕ್ಕ ಎಲ್ಲಾ ಶಕ್ತಿಗಳುಳ್ಳ (ಬ್ರಹ್ಮ). ಸೂ. ಭಾ. ೨-೧-೨೪.

**ಪಾರಮಾರ್ಥಿಕ** :- ನಿಜವಾಗಿರುವ ವಸ್ತುವಿಗೆ ಸಂಬಂಧಪಟ್ಟ, ಬರಿಯ ವ್ಯವಹಾರಕ್ಕೆ ಸಂಬಂಧಪಟ್ಟದ್ದಲ್ಲ.

**ಪಾರಿವ್ರಾಜ್ಯಂ** :- ಸಂನ್ಯಾಸ. ಸ್ಮೃತಿಯಲ್ಲಿ ಹೇಳಿದ ದಂಡಾದಿಸಹಿತ ಸಂನ್ಯಾಸ, ಶ್ರುತ್ಯುಕ್ತವಾದ ಪರಮಹಂಸಪಾರಿವ್ರಾಜ್ಯ- ಎಂಬ ಎರಡು ಬಗೆಯ ಸಂನ್ಯಾಸ, ಬೃ.ಭಾ. ೩-೫-೧.

**ಪುರುಷೋತ್ಪ್ರೇಕ್ಷಾಮಾತ್ರನಿಬನ್ಧನ** :- ಮನುಷ್ಯನು ಊಹಿಸಿದ ಮಾತ್ರದಿಂದ ಉಂಟಾಗಿರುವ (ತರ್ಕ), ಸೂ. ಭಾ. ೨-೧-೧೧.

**ಪ್ರಕೃತಿ** :- (೧) ಉಪಾದಾನಕಾರಣ, ಸೂ.ಭಾ. ೧-೪-೨೩; (೨) ಪೂರ್ವಜನ್ಮ ಸಂಸ್ಕಾರ, ಗೀ.ಭಾ. ೩-೩೩; (೩) ಪರಮಾತ್ಮನ ತ್ರಿಗುಣಾತ್ಮಕ ಮಾಯೆ, ಅವ್ಯಾಕೃತ, ಗೀ. ಭಾ. ೯-೮, ಗೀ.ಭಾ. ಗೀ.ಭಾ. ೨೧೧; (೪) ಪುರುಷ, ಪ್ರಕೃತಿ- ಎಂಬ ಪರಮಾತ್ಮನ ಎರಡು ಪ್ರಕೃತಿಗಳಲ್ಲಿ ಒಂದು, ಗೀ. ಭಾ. ಭಾ. ೨೧೦; (೫) ದೈವ, ಆಸುರ- ಎಂಬ ಜೀವಸ್ವಭಾವಗಳಲ್ಲಿ ಒಂದು, ಗೀ. ಭಾ. ಭಾ. ೩೮೫.

**ಪ್ರಚಾರಃ** :- ಮನಸ್ಸಿನ ವೃತ್ತಿ. ಅಧ್ಯಾಸಭಾಷ್ಯ; ಮಾಂ. ಕಾ. ಭಾ. ೩-೩೪.

**ಪ್ರಜಾಪತಿಃ** :- ತ್ರೈಲೋಕ್ಯಶರೀರಿಯಾದ ವಿರಾಟ್ಪುರುಷ. ಮುಂ. ಭಾ. ೨-೧-೪; ಹಿರಣ್ಯಗರ್ಭ. ಪ್ರ. ಭಾ. ೧-೪.

**ಪ್ರಜ್ಞಾ** :- (೧) ಮನಸ್ಸಿನ ಜ್ಞಾನಶಕ್ತಿ. ಸೂ. ಭಾ. ೧-೧-೩೧; (೨) ಚೈತನ್ಯ ಸ್ವರೂಪ, ಐ. ಭಾ. ೩-೧-೩.

**ಪ್ರತ್ಯಗಾತ್ಮಾ** :- ನಮ್ಮೊಳಗಿರುವ ಆತ್ಮ. ಆತ್ಮಶಬ್ದವು ಸಾಮಾನ್ಯ ಪ್ರತ್ಯಗಾತ್ಮನನ್ನೇ ತಿಳಿಸುವದೆಂಬುದು ಶಾಂಕರಪ್ರಕ್ರಿಯೆಯ ಅಭ್ಯುಪಗಮ, ಕ. ೨-೧-೧.

**ಪ್ರತ್ಯಯಃ** :- ಅರಿವು, ವೃತ್ತಿಜ್ಞಾನ.

**ಪ್ರತ್ಯುಪಸ್ಥಾಪಿತ** :- ತಂದೊಡ್ಡಿದ, ಅವಿದ್ಯೆಯು ಕಲ್ಪಿಸಿದ, ನಾಮರೂಪಗಳು (ಸೂ. ೨-೨-೨), ಕಾರ್ಯಕರಣಗಳು (೧-೨-೨೦), ಅಂತಃಕರಣ (೧-೨-೧೨) ಇವೆಲ್ಲ ಅವಿದ್ಯಾಪ್ರತ್ಯುಪಸ್ಥಾಪಿತ.

**ಪ್ರಮಾ** :- ಪ್ರಮಾಣದಿಂದುಂಟಾಗುವ ಜ್ಞಾನ. ಉ.ಸಾ.ಪ. ೧೮-೧೮೭; ಆತ್ಮಚೈತನ್ಯವೇ ಪ್ರಮೆಯ ಸ್ವರೂಪ, ಉಪ. ಗ. ೫೭.

**ಪ್ರಮಾಣಮ್** :- ಪ್ರಮೆಗೆ ಕರಣವಾಗಿರುವ ಪ್ರತ್ಯಕ್ಷಾದಿಗಳು, ಅಧ್ಯಾ . ಭಾ.

**ಪ್ರಮಾತಾ** :- ದೇಹೇಂದ್ರಿಯಗಳನ್ನು ತಾನುತನ್ನದೆಂದು ತಿಳಿದಿರುವ ಜ್ಞಾತೃ. ಅಧ್ಯಾ . ಭಾ.; ಪ್ರಮಾತೃವಿನ ನಿಜವಾದ ಸ್ವರೂಪವು ಆತ್ಮನೇ, ಉಪ. ಗ. ೬೧.

**ಪ್ರಸೂತಫಲಮ್, ಪ್ರವೃತ್ತಫಲಮ್** :- ಫಲವನ್ನು ಕೊಟ್ಟಿರುವ ಕರ್ಮ, ಪ್ರಾರಂಭವಾಗಿರುವ ಫಲವುಳ್ಳ ಕರ್ಮ, ಗೀ.ಭಾ. ೧೮-೬೩, ಸೂ.ಭಾ. ೪-೧-೧೫.

**ಪ್ರಾಜ್ಞಃ** :- (೧) ಸುಷುಪ್ತಾಭಿಮಾನಿಯಾದ ಆತ್ಮ, ಮಾಂ. ಭಾ. ೫ (ಭಾ.ಭಾ.೧೬); ಈಶ್ವರ, ಸೂ.ಭಾ. ೧-೩-೪೨.

**ಪ್ರಾಣಃ** :- (೧) ಶರೀರದಲ್ಲಿರುವ ಪ್ರಾಣಾಪಾನಾದಿ ಪಂಚವೃತ್ತಿಗಳುಳ್ಳ ವಾಯು, ೨-೪-೮; ೨. ಹಿರಣ್ಯಗರ್ಭ, ೧-೧-೮.

**ಪ್ರಾಣಾನಾಂ ಧಾರಯಿತಾ** :- ಪ್ರಾಣಗಳನ್ನು ಧರಿಸುವ ಜೀವ, ಸೂ. ಭಾ. ೧-೧-೬.

**ಪ್ರಾಣಾಯಾಮಃ** :- ಪ್ರಾಣಗಳನ್ನು ತಡೆಗಟ್ಟುವ ಕ್ರಮ, ಸೂ. ಭಾ. ೨-೧-೨೦.

**ಪ್ರಾಪ್ತಾಣಿಮಾದ್ಯೈಶ್ವರ್ಯಃ** :- ಅಣಿಮಾದಿಸಿದ್ಧಿಗಳನ್ನು ಪಡೆದುಕೊಂಡಿರುವ ಯೋಗಿ. ಸೂ. ಭಾ. ೧-೨-೧೮.

**ಪ್ರಾಯಶ್ಚಿತ್ತಮ್** :- ದೋಷವನ್ನು ಕಳೆಯುವದಕ್ಕಾಗಿ ವಿಧಿಸಿದ ಕರ್ಮ, ಸೂ. ಭಾ. ೪-೧-೧೩.

**ಪ್ರಾರಬ್ಧ ಫಲ** :- ಫಲವನ್ನು ಕೊಟ್ಟುಬಿಟ್ಟಿರುವ ಕರ್ಮ, ಗೀ. ೫-೧೩ (ಭಾ.ಭಾ.೩೪೩). 'ಪ್ರಾರಬ್ಧ' ಎಂದಿಷ್ಟೇ ಸ್ವತಂತ್ರವಾಗಿ ಪ್ರಾರಬ್ಧಫಲಕರ್ಮ ವೆಂಬರ್ಥದಲ್ಲಿ ಭಾಷ್ಯದಲ್ಲಿ ಪ್ರಯೋಗವಾಗಿಲ್ಲ.

**ಪ್ರಾವಾದುಕಃ** :- ವಾದಿ, ಮಾಂ. ಕಾ. ಭಾ. ೪-೮೮.

**ಪ್ರೀತಿಃ** :- ಆನಂದ. ನಿರತಿಶಯ ಪ್ರೀತಿಯೇ ಸ್ವರ್ಗಶಬ್ದವಾಚ್ಯವೆಂದೂ ಅದು ಕರ್ಮದಿಂದ ದೊರೆಯುವದೆಂದೂ ಹೇಳುತ್ತಿದ್ದ ಮೀಮಾಂಸಕರ ಮತವನ್ನು ತೈತ್ತಿರೀಯಭಾಷ್ಯದಲ್ಲಿ ಅವತರಣಿಕೆಯಲ್ಲಿ ಕೊಟ್ಟಿದೆ.

**ಪ್ರೇತ್ಯ :-** ಇಲ್ಲಿಂದ ಹೊರಟುಹೋಗಿ, ಸತ್ತು . ಮುಕ್ತಿಯು ಸತ್ತ ಬಳಿಕ ಆಗುವ ಫಲವಲ್ಲವೆಂಬುದನ್ನು ತಿಳಿಸುವದಕ್ಕೆ ಆಚಾರ್ಯರು ಈ ಶಬ್ದವನ್ನು ಪುತ್ರಮಿತ್ರಾದಿಗಳಲ್ಲಿ ನಾನು ನನ್ನದು ಎಂಬ ಅಭಿಮಾನವನ್ನು ಬಿಟ್ಟು ಎಂಬರ್ಥದಲ್ಲಿ ವ್ಯಾಖ್ಯಾನ ಮಾಡಿರುತ್ತಾರೆ. ಕೇ. ಭಾ. ೧-೨; ತೈ.ಭಾ. ೨-೮.

**ಫಲಮ್ :-** (೧) ಕ್ರಿಯೆಯ ಫಲ, ಜ್ಞಾನದ ಫಲ. ಧರ್ಮಜಿಜ್ಞಾಸೆಯ ಫಲವು ಅನುಷ್ಠಾನಾಪೇಕ್ಷವು; ಜ್ಞಾನಫಲವು ಜ್ಞಾನಸಮಕಾಲದಲ್ಲಿ ಆಗುವದು. ಸೂ. ಭಾ. ೧-೧-೧. (೨) ಕರ್ಮದ ಫಲವಾಧ ದೇಹ ಗೀ. ಭಾ.೧೩-೨ (ಭಾ.ಭಾ. ೨೨೨). (೩) ಫಲರೂಪವಾದ ಜ್ಞಾನ, ಅವಗತಿ, ಉ. ಸಾ. ಗ. ೫೨.

**ಫಲಸಙ್ಕಲ್ಪಃ, ಫಲಾಭಿಸನ್ಧಿಃ, ಫಲಾಸಙ್ಗಃ :-** ಫಲವನ್ನು ಮನಸ್ಸಿಗೆ ತಂದುಕೊಳ್ಳುವದು, ಇಚ್ಛಿಸುವದು. ಅದಕ್ಕೆ ಅಂಟಿಕೊಳ್ಳುವದು, ಗೀ. ಭಾ. ಭಾ. ಭಾ. ೫; ೯-೯.

## ಬ

**ಬನ್ಧಃ :-** ಸಂಸಾರಕ್ಕೆ ಕಟ್ಟುಬಿದ್ದಿರುವದು, ಉಪ.ಪ. ೧೫-೧೯.

**ಬದ್ಧಃ :-** ಸಂಸಾರಿಯಾದ ಜೀವನು, ಮಾಂ. ಕಾ. ೨-೩೨.

**ಬಿಮ್ಬಮ್ :-** ಚಂದ್ರಾದಿಗಳ ಪ್ರತಿಬಿಂಬ, ಉಪ. ಸಾ. ೧೭-೩೪.

**ಬೀಜಮ್, ಬೀಜನಿದ್ರಾ :-** ಎಚ್ಚರಕನಸುಗಳಿಗೆ ಕಾರಣವಾದ ನಿದ್ರೆ , ಅಜ್ಞಾನ. ಉಪ.ಸಾ. ೧೬-೧೮. ಮಾಂ. ಕಾ. ಭಾ. ೧-೧೩, ೧೪.

**ಬೀಜಾಙ್ಕುರವತ್ :-** ಅನಾದಿಯಾಗಿರುವದಕ್ಕೆ ದೃಷ್ಟಾಂತ, ಸೂ. ಭಾ. ೨-೧-೩೬. ಅನಾದಿಯಾದ್ದಕ್ಕೆ ನಾಶವುಂಟೆಂಬುದು ವ್ಯವಹಾರದೃಷ್ಟಿಯಿಂದ ಮಾತ್ರ ; ನಿಜವಾಗಿ ಅನಾದಿಯಾದದ್ದು ಇಲ್ಲ. ಮಾಂ. ಕಾ. ೪-೨೦.

**ಬುದ್ಧಿಃ :-** ಜ್ಞಾನ, ಆತ್ಮಜ್ಞಾನ, ಅಂತಃಕರಣ, ತಿಳಿದುಕೊಳ್ಳುವ ಸಾಮರ್ಥ್ಯ, ನಿಶ್ಚಯಾತ್ಮಕ ಅಂತಃಕರಣ, ಸಮಷ್ಟಿಬುದ್ಧಿ, ಇದನ್ನು ಮಾಡಿ ಇದನ್ನು ಪಡೆಯಬೇಕೆಂಬ ಬುದ್ಧಿ, ಇಷ್ಟು ಅರ್ಥಗಳಿಗೂ ಉದಾಹರಣೆಗಳು ಗೀತಾಭಾಷ್ಯದಲ್ಲಿ ದೊರೆಯುವವು.

**ಬುದ್ಧಿವೃತ್ತಿಃ :-** ಜ್ಞಾನ, ಅಜ್ಞಾನ ಮುಂತಾದ ಅಂತಃಕರಣವೃತ್ತಿ .

**ಬುದ್ಧೀನ್ದ್ರಿಯಾಣಿ :-** ಜ್ಞಾನೇಂದ್ರಿಯಗಳು, ಚಕ್ಷುರಾದಿಗಳು.

**ಬ್ರಹ್ಮಜ್ಞಾನಮ್, ಬ್ರಹ್ಮವಿದ್ಯಾ :-** ಬ್ರಹ್ಮದ ಸರಿಯಾದ ಜ್ಞಾನ, ಗೀ. ಭಾ. ಭಾ. ೬೦೦, ಮುಂ. ಭಾ. ೧-೧-೧.

**ಬ್ರಹ್ಮಲೋಕ :-** ಜ್ಞಾನಕರ್ಮಸಮುಚ್ಚಯದಿಂದ ಪಡೆಯುವ ಕಾರ್ಯ ಬ್ರಹ್ಮಲೋಕ, ಸತ್ಯಲೋಕ, ಕಾ. ೩-೩-೫, ಸೂ. ಭಾ. ೧-೩-೧೩; ಬ್ರಹ್ಮವೆಂಬ ಲೋಕ, ಬ್ರಹ್ಮ, ಛಾಂ ಭಾ. ೮-೩-೨, ಸೂ. ಭಾ. ೧-೩-೧೫.

**ಬ್ರಹ್ಮವಾಕ್ಯಮ್ :-** ಬ್ರಹ್ಮವನ್ನು ಹೇಳುವ ವಾಕ್ಯ, ಬ್ರಹ್ಮೋಪಾಸನೆಯ ವಾಕ್ಯವಲ್ಲ, ಸೂ. ಭಾ. ೩-೨-೨೧.

**ಬ್ರಹ್ಮವಾದೀ :-** ಬ್ರಹ್ಮವು ಜಗತ್ಕಾರಣವೆಂಬ ವಾದಿ, ಸೂ. ಭಾ. ೨-೨-೩೯.

**ಬ್ರಹ್ಮಾತ್ಮಪ್ರತ್ಯಯ, ಬ್ರಹ್ಮಾತ್ಮೈಕತ್ವವಿಜ್ಞಾನಮ್ಃ :-** ಬ್ರಹ್ಮವು ನಮ್ಮ ಆತ್ಮನೇ ಎಂಬ ತಿಳಿವಳಿಕೆ, ಕಾ. ಭಾ. ೨-೩-೧೫.

**ಬ್ರಹ್ಮಾತ್ಮಾ :-** ಬ್ರಹ್ಮರೂಪವಾದ ಆತ್ಮನು, ಎಲ್ಲರಿಗೂ ಆತ್ಮನಾಗಿರುವ ಪರಮಾತ್ಮನು, ಸೂ. ಭಾ. ೧-೧-೫.

**ಬ್ರಹ್ಮಾದಿಸ್ತಂಬಪರ್ಯನ್ತಾನಿ :-** ಹಿರಣ್ಯಗರ್ಭನಿಂದ ಹಿಡಿದು ಸ್ಥಾವರದವರೆಗಿನ ಭೂತಗಳು, ಕಾ. ಭಾ. ೧-೩-೧೨, ೨-೧-೧೦.

**ಬ್ರಹ್ಮಾನನ್ದಃ :-** ಬ್ರಹ್ಮದ ಸ್ವರೂಪವಾದ ಆನಂದ, ತೈ. ಭಾ. ೨-೮, (ಭಾ.ಭಾ.೧೯೬).

**ಬ್ರಹ್ಮಾವಗತಿಃ :-** ಬ್ರಹ್ಮವೇ ಸತ್ಯವೆಂದರೂ ನಮ್ಮ ಆತ್ಮನೆಂದೂ ಮಾಡಿಕೊಳ್ಳುವ ನಿಶ್ಚಯ, ಸೂ. ಭಾ. ೧-೧-೧.

**ಬೀಜಶಕ್ತಿಃ :-** ಪರಮೇಶ್ವರನನ್ನು ಆಶ್ರಯಿಸಿಕೊಂಡಿರುವ ಜಗತ್ಕಾರಣಶಕ್ತಿ. ಇದಕ್ಕೆ ಪ್ರಕೃತಿ, ಆಕಾಶ, ಅಕ್ಷರ, ಮಾಯಾ, ಅವ್ಯಕ್ತ- ಎಂಬ ಹೆಸರುಗಳೂ ಉಂಟು. ಸೂ. ಭಾ. ೧-೪-೩.

## ಭ

**ಭಗವಾನ್ :-** (೧) ಪೂಜ್ಯ ; (೨) ಐಶ್ವರ್ಯಾದಿಷಡ್ಗುಣವುಳ್ಳ ಸರ್ವಜ್ಞನಾದ ಭಗವಂತ.

**ಭಕ್ತಿಃ :-** ಆರ್ತಾದಿಗಳು ಭಗವಂತನಲ್ಲಿ ಮಾಡುವ ಪ್ರೇಮ; ಜ್ಞಾನಿಯು ಮಾಡುವ ಪರಭಕ್ತಿ ಎಂಬ ಜ್ಞಾನನಿಷ್ಠೆ, ಗೀ. ಭಾ. ೧೮-೫೪.

**ಭಾವಃ :-** (೧) ಅಂತಃಕರಣಾಶಯ, ಗೀ. ಭಾ. ೧೦-೧೧; (೨) ಬುದ್ಧಿಯೇ ಮುಂತಾದ ಭಾವಗಳು, ಗೀ. ಭಾ. ೧೦-೪, ೬; (೩) ಭಾವನೆ, ಅದರಲ್ಲಿಯೇ ಅಭಿನಿವೇಶ, ಗೀ. ಭಾ. ೧೦-೮.

**ಭಾವವಿಕಾರಾಃ :-** ವಸ್ತುವಿನಲ್ಲಿ ಆಗುವ ಹುಟ್ಟುವದು, ಇರುವದು, ಬೆಳೆಯುವದು, ಮುಂತಾದ ವಿಕ್ರಿಯೆಗಳು.

**ಭಾವನಾವಿಜ್ಞಾನಮ್ :-** ಉಪಾಸನೆಯಿಂದಾಗುವ ಪ್ರತ್ಯಯವಿಶೇಷ, ಸಾಕ್ಷಾತ್ಕಾರ ೪-೧-೧೨.

**ಭಾವನಾಪರಿಪಾಕಃ :-** ಜ್ಞಾನಸಾಧನಗಳ ಭಾವನೆಯು ಪಕ್ವವಾದದ್ದು; ಇದರಿಂದಲೇ ತತ್ತ್ವಜ್ಞಾನವುಂಟಾಗುವದು, ೧೩-೧೧.

**ಭಿಕ್ಷಾ :-** ಪರಮಹಂಸಪರಿವ್ರಾಜಕನಿಗೆ ತನ್ನದೆಂಬ ವಸ್ತುವಿಲ್ಲದರಿಂದ ಆಹಾರಾರ್ಥವಾಗಿ ಅವನು ಬೇಡಿ ತೆಗೆದುಕೊಳ್ಳುವ ಪದಾರ್ಥ.

**ಭೂತಃ :-** (೧) ಇದ್ದುಕೊಂಡಿರುವ, ಮಾಂ. ಕಾ. ಭಾ. ೪-೪ (ಭಾ. ಭಾ. ೨೨೦); (೨) ಪರಮಾರ್ಥವಾದ, ಮಾಂ. ಕಾ. ೪-೨೫ (ಭಾ. ಭಾ. ೨೬೦).

**ಭೂತಮ್ :-** ಪರಮಾತ್ಮನನ್ನು ಶ್ರುತಿಯಲ್ಲಿ 'ಮಹದ್‌ಭೂತಮ್' ಎಂದು ಕರೆದಿದೆ. ಮೂರು ಕಾಲಕ್ಕೂ ಇರುವದು ಎಂದರ್ಥ. ಬೃ.ಭಾ.

**ಭೂತಾನಿ :-** (೧) ಪಂಚಭೂತಗಳು; (೨) ಬ್ರಹ್ಮಾದಿಸ್ತಂಬಪರ್ಯಂತವಾದ ಪ್ರಾಣಿಗಳು.

**ಭೂತಾಕಾಶ, ಭೌತಿಕಾಕಾಶ :-** ಭೂತರೂಪವಾದ ಆಕಾಶವು, ಅವ್ಯಾಕೃತಾಕಾಶವಲ್ಲ.

**ಭೂಮಿಃ :-** (೧) ನೆಲ, ಪೃಥಿವೀರೂಪವಾದ ಭೂತ; (೨) ಮನಸ್ಸಿನ ಅಂತಸ್ತು, ಗೀ. ಭಾ. ೬-೩೫.

**ಭೂತವಸ್ತು :-** ಸಿದ್ಧವಾಗಿರುವ ವಸ್ತು, ಧರ್ಮಾದಿಗಳಂತೆ ಸಾಧ್ಯವಾದದ್ದಲ್ಲ. ಸೂ. ಭಾ. ೧-೧-೨. ಇದಕ್ಕೆ ಪರಿನಿಷ್ಪನ್ನವಸ್ತು, ಪರಿನಿಷ್ಠಿತವಸ್ತು - ಎಂದೂ ಹೆಸರುಂಟು.

**ಭೂತಸೂಕ್ಷ್ಮಮ್ :-** (೧) ಭೂತಗಳ ಸೂಕ್ಷ್ಮರೂಪ, ಸೂ. ಭಾ. ೩-೧-೧; ಅವ್ಯಾಕೃತವೆಂಬ ಜಗತ್ತಿನ ಕಾರಣರೂಪ, ಸೂ. ಭಾ. ೧-೨-೨೧.

**ಭೋಕ್ತಾ :-** ಅನುಭವಿಸುವವನು. ಜೀವನು ಉಪಾಧಿಯಿಂದ ಭೋಕ್ತೃ ವಾಗಿರುತ್ತಾನೆ, ಕ. ಭಾ. ೧-೩-೪.

**ಭೋಗಾಪವರ್ಗೌ :-** ಸಂಸಾರದ ಸುಖದುಃಖಭೋಗ, ಅವುಗಳಿಂದ ಬಿಡುಗಡೆ ಎಂಬ ರೂಪದ ಮೋಕ್ಷ- ಇವು.

**ಭ್ರಾನ್ತಿಪ್ರತ್ಯಯ** :- ತಪ್ಪಾಗಿ ತಿಳಿಯುವ ಪ್ರತ್ಯಯ; ಇದನ್ನು ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ- ಎಂದೂ ಕರೆಯುತ್ತಾರೆ. ದೇಹಾದಿಗಳೇ ತಾನೆಂಬ ಮಿಥ್ಯಾಪ್ರತ್ಯಯದಿಂದಲೇ ಕರ್ತೃತ್ವಭೋಕ್ತೃತ್ವರೂಪವಾದ ಸಂಸಾರಾನರ್ಥವು. ಗೀ. ಭಾ. ೧೮-೬೭.

**ಭ್ರಾಮಕಮ್** :- ಸೂಜಿಕಲ್ಲು; ತಾನು ಕೆಲಸ ಮಾಡದೆ ಮತ್ತೊಂದನ್ನು ಕೆಲಸ ಮಾಡಿಸುವ ವಸ್ತುವಿಗೆ ದೃಷ್ಟಾಂತ, ಗೀ. ಭಾ. ೧೮-೬೬ (ಭಾ. ಭಾ. ೬೦೧).

## ಮ

**ಮನಃ** :- (೧) ಸಂಶಯಸಂಕಲ್ಪವಿಕಲ್ಪಾದಿಗಳನ್ನು ಮಾಡುವ ಅಂತಃಕರಣ, ಅಂತಃಕರಣ, ಸೂ. ಭಾ. ೨-೩-೩೨.

**ಮನುಷ್ಯಾಃ** :- ಶಾಸ್ತ್ರಕ್ಕೆ ಮನುಷ್ಯರೇ ಅಧಿಕಾರಿಗಳು ಎಂಬ ಮೀಮಾಂಸಕರ ಪಕ್ಷವನ್ನು ಆಚಾರ್ಯರೂ ಒಪ್ಪಿರುತ್ತಾರೆ; ಕರ್ಮಗಳಿಗೆ ತ್ರೈವರ್ಣಿಕರೇ ಅಧಿಕಾರಿಗಳೆಂಬ ಅಭಿಪ್ರಾಯದಿಂದ ಅವರನ್ನು ಮಾತ್ರ ಮನುಷ್ಯರೆಂದು ಕರೆದಿರುತ್ತಾರೆ. (ಸೂ. ಭಾ. ೧-೩-೨೫) ಗೀ. ಭಾ. ೪-೧೧.

**ಮನುಷ್ಯಾದಿಸ್ತಂಬಪರ್ಯನ್ತಾನಿ** :- ಮನುಷ್ಯಾದಿಸ್ಥಾವರದವರೆಗಿನ ಪ್ರಾಣಿಗಳು. ಇವರಲ್ಲಿ ಜ್ಞಾನ, ಐಶ್ವರ್ಯ- ಮುಂತಾದವು ಕಡಿಮೆಕಡಿಮೆಯಾಗುತ್ತಾ ಬಂದಿರುವದು ಕಾಣುತ್ತದೆ. ಸೂ. ಭಾ. ೧-೩-೩೦.

**ಮನುಷ್ಯಾದಿಹಿರಣ್ಯಗರ್ಭಪರ್ಯನ್ತಾನಿ** :- ಮನುಷ್ಯನಿಂದ ಹಿಡಿದು ಹಿರಣ್ಯಗರ್ಭನವರೆಗಿನ ಭೂತಗಳು ಮೇಲುಮೇಲಕ್ಕೆ ಹೋದಂತೆ ಜ್ಞಾನೈಶ್ವರ್ಯಾದಿಗಳು ಹೆಚ್ಚುತ್ತಾಹೋಗಿರುವವು, ಸೂ. ಭಾ. ೧-೩-೩೦.

**ಮನೋರಥಃ** :- ಮನಸ್ಸಿನಲ್ಲಿಯೇ ಭಾವಿಸಿಕೊಳ್ಳುವದು, ಮಾಂ. ಕಾ. ಭಾ. ೨-೧೩.

**ಮನೋವಿಕಲ್ಪನಾ** :- ಮನಸ್ಸಿನಿಂದ ಕಲ್ಪಿಸಿ ಹೊರಗಿದೆ ಎಂದು ಭಾವಿಸುವ ಭ್ರಾಂತಿಯ ತೋರಿಕೆಗಳು, ಹಗ್ಗದ ಹಾವು ಮುಂತಾದವು. ಪ್ರಾತಿಭಾಸಿಕವಾದ ದೃಶ್ಯಗಳು ಅವಿದ್ಯೆಯಿಂದ ಉತ್ಪನ್ನವಾಗುವವೆಂಬ ಈಚಿನ ವೇದಾಂತಿಗಳ ಮತವು ಭಾಷ್ಯದಲ್ಲಿಲ್ಲ. ಮಾಂ. ಕಾ. ಭಾ. ೨-೩೨.

**ಮನ್ದಬ್ರಹ್ಮವಿದಃ** :- ಬ್ರಹ್ಮವನ್ನು ಸರಿಯಾಗಿ ತಿಳಿದುಕೊಳ್ಳದೆ ಇರುವವರು, ಅಪರಬ್ರಹ್ಮವನ್ನೇ ಉಪಾಸನೆ ಮಾಡುವವರು, ಕ. ಭಾ. ೨-೩-೧೫.

**ಮರೀಚಿಜಲಮ್, ಮರೀಚ್ಯುದಕಮ್ :-** ಬಿಸಿಲುಕುದುರೆಯಲ್ಲಿ ತೋರುವ ಹುಸಿತೋರಿಕೆಯ ನೀರು. ಜಗತ್ತು ಹುಸಿಯೆಂಬುದಕ್ಕೆ ದೃಷ್ಟಾಂತ, ಗೀ. ಭಾ.೨-೧೬.

**ಮಹಾನ್ ಆತ್ಮಾ :-** ಭೋಕ್ತೃವಾದ ಜೀವ, ಅಥವಾ ಹಿರಣ್ಯಗರ್ಭನ ಬುದ್ಧಿ, ಸೂ. ಭಾ. ೧-೪-೧.

**ಮಹಾಪ್ರಲಯಃ :-** ಎಲ್ಲವೂ ಸಂಪೂರ್ಣವಾಗಿ ನಾಶವಾಗುವ ಸ್ಥಿತಿ, ಅವಾಂತರಪ್ರಲಯವಲ್ಲದ ಸ್ಥಿತಿ, ಸೂ. ಭಾ. ೧-೩-೩೦.

**ಮಹಾಭೂತಾನಿ :-** ಸ್ಥೂಲಭೂತಗಳು, ಎಲ್ಲಾ ಭೂತಗಳ ಬೆರಕೆಯುಳ್ಳವಾಗಿ ಗೋಚರವಾಗುವ ಭೂತಗಳು, ಪ್ರ .ಭಾ. ೬-೪. ಸೂಕ್ಷ್ಮಭೂತಗಳಾದ ತನ್ಮಾತ್ರೆಗಳು, ಗೀ. ಭಾ. ೧೩-೫.

**ಮಹಾವಾಕ್ಯಮ್ :-** (೧) ಎರಡು ಮೂರು ಒಳತಾತ್ಪರ್ಯವುಳ್ಳ ಅವಾಂತರ ವಾಕ್ಯಗಳು ಸೇರಿ ಒಂದು ಮಹಾವಾಕ್ಯವಾಗುವದು. ಮಹಾವಾಕ್ಯದಲ್ಲಿ ಮುಖ್ಯತಾತ್ಪರ್ಯವಿದ್ದರೂ ಅವಾಂತರವಾಕ್ಯಗಳು ಪ್ರಮಾಣಾಂತರ ಸಿದ್ಧವಲ್ಲದ ಪ್ರಮಾಣಾಂತರವಿರುದ್ಧವಲ್ಲದ ಅಭಿಪ್ರಾಯವನ್ನು ತಾತ್ಪರ್ಯದಿಂದ ಹೇಳಬಹುದು. ಸೂ.ಭಾ. ೧-೩-೩೩.

(ಕ) 'ತತ್ತ್ವಮಸಿ' ಮುಂತಾದವುಗಳನ್ನು ಮಹಾವಾಕ್ಯವೆಂಬ ಹೆಸರಿನಿಂದ ಕರೆದಿರುವದು ಭಾಷ್ಯದಲ್ಲಿ ಕಂಡುಬರುವದಿಲ್ಲ.

**ಮಹಾಸುಪ್ತಿ :-** ದೊಡ್ಡನಿದ್ರೆ, ಅವ್ಯಕ್ತವೆಂಬ ನಾಮರೂಪಗಳ ಅವ್ಯಾಕೃತಾವಸ್ಥೆ, ಮಾಯೆ. ಸೂ. ಭಾ. ೧-೪-೩.

**ಮಹೇಶ್ವರ :-** ಈಶ್ವರರಾದವರೆಲ್ಲರಿಗೂ ಈಶ್ವರನಾದ ಪರಮಾತ್ಮನು, ಗೀ.ಭಾ. ೧೩-೨೨. ಈಶ್ವರನೆಂದರೆ ಮಾಯಾವಿಶಿಷ್ಟನೆಂದೇ ಅರ್ಥಮಾಡಬೇಕೆಂಬ ನಿರ್ಬಂಧವು ಭಾಷ್ಯದಲ್ಲಿ ಕಾಣುವದಿಲ್ಲ.

**ಮಾನಸೋ (ಜಪಃ) :-** ವಿಧಿಯಜ್ಞ, ಜಪಯಜ್ಞ, ಉಪಾಂಶು- ಇವುಗಳೆಲ್ಲಕ್ಕಿಂತಲೂ ಹೆಚ್ಚಿನ ಸಾಧನವಾದ ಜ್ಞಾನಯಜ್ಞವು, ಗೀ. ಭಾ. ೧೮-೭೦.

**ಮಾಯಾ :-** (೧) ಕಣ್ಣು ಕಟ್ಟು, ಇಂದ್ರಜಾಲ, ಮಾಂ. ಕಾ. ೧-೧೭; (೨) ಅವಿದ್ಯಾಕಲ್ಪಿತವಾದ ನಾಮರೂಪಗಳು, ಇವು ಆತ್ಮನೂ ಅಲ್ಲ, ಆತ್ಮನಿಗಿಂತ ಬೇರೆಯೂ ಅಲ್ಲ; ಗೊತ್ತುಪಡಿಸಿ ಹೇಳುವದಕ್ಕೆ ಬಾರದ ಹುಸಿತೋರಿಕೆಯಾಗಿವೆ. ಸೂ. ಭಾ. ೨-೧-೧೪. ಅವಿದ್ಯೆಯೇ ಮಾಯೆ- ಎಂಬ ಉಪದೇಶವು ಭಾಷ್ಯದಲ್ಲಿಲ್ಲ. ಸೂ. ಭಾ. ೧-೪-೩ನ್ನು ನೋಡಿ.

**ಮಾಯಾತ್ಮಾ** :- ಹುಸಿತೋರಿಕೆಯ ಆತ್ಮ, ಜೀವ, ಮುಂ. ಭಾ. ೯೨.

**ಮಾಯಾಮಯ** :- ಹುಸಿತೋರಿಕೆಯ, ಗೀ. ಭಾ. ೪-೯, ೧೫-೧.

**ಮಾಯಾಸಂವ್ಯವಹಾರ** :- ಅವಿದ್ಯೆಯಿಂದಾದ ವ್ಯವಹಾರ, ೪-೧೩.

**ಮಾಯೋಪಾಧಿಭೂತಾಃ** :- ಹುಸಿಯಾದ ಉಪಾಧಿಯಾಗಿರುವ ಸತ್ತ್ವರಜಸ್ತಮೋಗುಣಗಳು, ೧೪-೨೦.

**ಮಿಥ್ಯಾ** :- ಹುಸಿತೋರಿಕೆ, ಮಾಂ. ಕಾಂ. ಭಾ. ೨-೭.

**ಮಿಥ್ಯಾಜ್ಞಾನಮ್, ಮಿಥ್ಯಾದರ್ಶನಮ್, ಮಿಥ್ಯಾಪ್ರತ್ಯಯಃ** :- ತಪ್ಪುತಿಳಿವಳಿಕೆ, ಜ್ಞಾನಾಭಾವ, ಅನ್ಯಥಾಜ್ಞಾನ - ಇವಕ್ಕಿಂತ ವ್ಯತಿರಿಕ್ತವಾದ ಅನಿರ್ವಚನೀಯಾವಿದ್ಯೆ ಎಂಬರ್ಥದಲ್ಲಿ ಭಾಷ್ಯದಲ್ಲಿ ಪ್ರಯೋಗವಿಲ್ಲ.

**ಮಾರ್ಗಃ** :- ಕರ್ಮಿಗಳು ಫಲಭೋಗಕ್ಕೆ ಹೋಗುವ ಪಿತೃಯಾಣ ಮಾರ್ಗ; ಉಪಾಸಕರು ಹೋಗುವ ದೇವಯಾನಮಾರ್ಗ. ಉಪಾಸಕರು ಮಾರ್ಗಚಿಂತನೆಯನ್ನೂ ಮಾಡಬೇಕು. ತೈ. ಭಾ. ೧-೬.

**ಮುಕ್ತಃ** :- (೧) ಆತ್ಮಸ್ವರೂಪವನ್ನು ಜ್ಞಾನದಿಂದ ಪಡೆದವನು, ಸೂ. ಭಾ. ೪-೪-೨ (೨) ಸಗುಣೋಪಾಸನೆಯ ಫಲವಾಗಿ ಸಮನಸ್ಕನಾಗಿ ಈಶ್ವರಸಾಯುಜ್ಯವನ್ನು ಪಡೆದವನು, ಸೂ. ಭೂ. ೪-೪-೧೬.

**ಮುಕ್ತೇಷು** :- ಬಿಟ್ಟಬಾಣ; ಪ್ರಾರಬ್ಧಕರ್ಮವು ಫಲವನ್ನು ಕೊಟ್ಟೇ ಮುಗಿಯುವದೆಂಬುದಕ್ಕೆ ದೃಷ್ಟಾಂತ ಗೀ. ಭಾ. ೧೩-೨೩; ಬೃ.ಭಾ. ೧-೪-೭.

**ಮುನಿಃ** :- (೧) ಸಂನ್ಯಾಸಿ; (೨) ತತ್ತ್ವವನ್ನು ಮನನಮಾಡಿದವ, ಸೂ. ಭಾ. ೩-೪-೪೭.

**ಮುಮುಕ್ಷು** :- ಸಾಧ್ಯಸಾಧನಗಳಲ್ಲಿ ವಿರಕ್ತನಾಗಿ ಮೋಕ್ಷವನ್ನೇ ಬಯಸುವವನು.

**ಮೂರ್ಛಾವಸ್ಥಾ** :- ಸ್ವಲ್ಪಮಟ್ಟಿಗೆ ಸುಷುಪ್ತಿಯನ್ನೂ ಸ್ವಲ್ಪಮಟ್ಟಿಗೆ ಮರಣವನ್ನೂ ಹೋಲುವ ಅವಸ್ಥೆ. ಈ ಅವಸ್ಥೆಯಲ್ಲಿ ಜೀವರು ಸಂಪೂರ್ಣವಾಗಿಯೇ ಬ್ರಹ್ಮದಲ್ಲಿ ಸೇರಿಹೋಗಿರುತ್ತಾರೆ, ಸೂ. ಭಾ. ೩-೨-೧೦.

**ಮೂಲಕಾರಣಮ್** :- ಜಗತ್ತಿಗೆಲ್ಲ ಕಾರಣವಾಗಿರುವ ಪರಬ್ರಹ್ಮ, ಸೂ. ಭಾ. ೨-೧-೧೮.

**ಮೃಗತೃಷ್ಣಾಮ್ಭಃ** :- ಬಿಸಿಲುಕುದುರೆಯಲ್ಲಿ ತೋರುವ ಹುಸಿನೀರು, ಅತ್ಯಂತವಾಗಿ ಅಸಂಭಾವಿತವಾದ ವಸ್ತು, ತೈ. ಭಾ. ೨-೧.

**ಮೃತ್ಯುಃ** :- ಮರಣ; ಯಮ; ಅವಿದ್ಯಾಕಾಮಕರ್ಮಗಳು, ಕ. ಭಾ. ೧-೨-೧೫.

**ಮೃತ್ಯುಪಾಶಃ** :- ಅಧರ್ಮ, ಅಜ್ಞಾನ, ರಾಗ, ದ್ವೇಷ ಮುಂತಾದವು, ಕ. ಭಾ. ೧-೧-೧೫.

**ಮೋಕ್ಷಃ** :- ಅವಿದ್ಯಾದಿಬಂಧಗಳು ತೊಲಗುವದು. ಮೋಕ್ಷವೆಂಬುದು ಕಾರ್ಯವೆಂಬ ಮತವು ಆಚಾರ್ಯರಿಗೆ ಸಮ್ಮತವಿಲ್ಲ, ಮುಂ. ಭಾ. ೩-೨-೬ (ಭಾ.ಭಾ. ೧೧೯)

**ಮೋಹಃ** :- ಅವಿದ್ಯೆ , ವಿಪರೀತಜ್ಞಾನ. ೧೦-೧, ೧೮-೭೩; ಇದು ಮನಸ್ಸನ್ನು ಆಶ್ರಯಿಸಿಕೊಂಡಿರುತ್ತದೆ, ಬೃ. ಭಾ. ೩-೫-೧.

## ಯ

**ಯಜುಃ** :- ಮನೋವೃತ್ತಿ ಎಂಬ ಉಪಾಧಿಯಿಂದ ಪರಿಚ್ಛಿನ್ನವಾಗಿರುವ, ಒಂದಾನೊಂದು ಮನೋವೃತ್ತಿಯಲ್ಲಿರುವ ಆತ್ಮಚೈತನ್ಯವೇ ಯಜುಸ್ಸು. ಆತನನ್ನು ತಿಳಿಸುವ ಯಜುರ್ವೃತ್ತಿಯು ನಿತ್ಯವೆಂದು ಭಾವಿಸುವದಕ್ಕೆ ಇದೇ ಕಾರಣ. ಋಗಾದಿಗಳನ್ನು ಹೀಗೆಯೇ ತಿಳಿಯಬೇಕು. ತೈ. ಭಾ. ೨-೩.

**ಯಜ್ಞಃ** :- (೧) ಯಾಗ; (೨) ಆತ್ಮ. ಸೋಪಾಧಿಕನಾದ ಆತ್ಮನನ್ನು ನಿರುಪಾಧಿಕವಾದ ಬ್ರಹ್ಮರೂಪದಿಂದ ಕಾಣುವದೇ ಒಂದು ಹೋಮವೆಂದು ಗೀತೆಯಲ್ಲಿ ಹೊಗಳಿದೆ. ಗೀ. ಭಾ. ೪-೨೫.

**ಯಥಾಪ್ರಸಿದ್ಧಃ** :- ಲೋಕದಲ್ಲಿ ವ್ಯವಹಾರಸಿದ್ಧವಾಗಿರುವ, ಪರಮಾರ್ಥವಲ್ಲದ. ಭೇದವ್ಯವಹಾರವು ಯಥಾಪ್ರಸಿದ್ಧವಾದ ಆಯಾ ಕಲ್ಪಿತವಸ್ತುವಿನ ವಿಷಯವೆಂದು ಭಾಷ್ಯದಲ್ಲಿ ಅಲ್ಲಲ್ಲಿ ಹೇಳಿದೆ. ಗೀ. ಭಾ. ೧೩-೨, ಭಾ. ಭಾ. ೨೨೧.

**ಯಮನಿಯಮಾದಯಃ** :- ಕರ್ತೃತ್ವಬುದ್ಧಿಯಿರುವಾಗ ಕರ್ಮದ ಒಂದು ಭಾಗವನ್ನು ಸಂನ್ಯಾಸಮಾಡುವವನಿಗೆ ಯಮನಿಯಮಾದಿಗಳು ಅತ್ಯವಶ್ಯ , ಗೀ. ಭಾ. ೫, ಭಾ. ಭಾ. ಭಾ. ೩೧೮.

**ಯಾವಜ್ಜೀವಶ್ರುತಿಃ** :- ಬದುಕಿರುವವರೆಗೂ ಅಗ್ನಿಹೋತ್ರಾದಿಗಳನ್ನು ಮಾಡಬೇಕೆಂಬ ಶ್ರುತಿಯು ಅಜ್ಞಾನಿಗಳ ವಿಷಯ, ಐ. ಭಾ. ಭಾ. ಭಾ. ೧೬.

**ಯುಕ್ತಃ** :- (೧) ಧ್ಯಾನಯೋಗಿ, ಸಮಾಹಿತಚಿತ್ತ , ಗೀ. ಭಾ. ೬-೮, ಭಾ.ಭಾ. ೩೮೬; (೨) ಈಶ್ವರನಲ್ಲಿ ಮನಸ್ಸನ್ನು ಇಟ್ಟಿರುವ ಕರ್ಮಯೋಗಿ, ಗೀ. ಭಾ. ೫-೧೨, ಭಾ.ಭಾ. ೩೪೦. (೩) ಬಲ್ಲವನು, ಮಿಕ್ಕವರಿಗೆ ಮೇಲುಪಙ್ಕ್ತಿಯಾಗಿರುವವನು,

ಗೀ. ಭಾ. ೩-೨೬. ಭಾ.ಭಾ. ೧೮೯. (೪) ತತ್ತ್ವದಲ್ಲಿಯೇ ನೆಲೆನಿಂತವನು, ಗೀ.ಭಾ. ೩೩೫. 'ಯುಕ್ತಾಹಾರ, ಯುಕ್ತಚೇಷ್ಟ- ಮುಂತಾದ ಶಬ್ದಗಳಲ್ಲಿ ಅತಿಯಾಗಿ ಹೆಚ್ಚಾಗಿ ಅಥವಾ ತೀರ ಕಡಿಮೆಯಾಗಿಲ್ಲದ ಎಂಬರ್ಥವಿದೆ.

**ಯುಕ್ತಿಃ :-** ಅನುಮಾನ, ತರ್ಕ. ದೃಷ್ಟದ ಸಾಮ್ಯದಿಂದ ಅದೃಷ್ಟವನ್ನು ಸಾಧಿಸುವದರಿಂದ ಯುಕ್ತಿಯು ಅನುಭವಕ್ಕೆ ಹತ್ತಿರ. ಸೂ. ಭಾ. ೨-೧-೪. ಶ್ರುತಿಯೂ ಯುಕ್ತಿಯನ್ನು ಅಥವಾ ತರ್ಕವನ್ನು ಬಯಸುತ್ತದೆ. ಸೂ. ಭಾ. ೧-೧-೧.

**ಯುಕ್ತ್ಯಾಭಾಸಃ :-** ಯುಕ್ತಿಯಂತೆ ತೋರುವ ತಪ್ಪು ತರ್ಕ.

**ಯೋಗಃ :-** (೧) ಮೋಕ್ಷಸಾಧನವಾದ ಕರ್ಮಯೋಗ, (೨) ಉಪಾಸನೆ (ಗೀ. ಭಾ. ೮-೨೩, ಭಾ.ಭಾ. ೨೩). (೩) ಸಮ್ಯಗ್ದರ್ಶನಕ್ಕೆ ಕಾರಣವಾದ ಧ್ಯಾನಯೋಗ ಅಥವಾ ನಿದಿಧ್ಯಾಸನ, (ಗೀ. ಭಾ. ೬-೩, ೮-೨೯, ಭಾ.ಭಾ. ೩೭೮, ೪೧೮, ಸೂ. ಭಾ. ೩-೨-೨೪) (೪) ಜ್ಞಾನನಿಷ್ಠೆ (ಗೀ. ಭಾ. ಭಾ. ಭಾ. ೨೨೧), (೫) ಭಗವಂತನ ಯೋಗಸಾಮರ್ಥ್ಯ, (ಗೀ. ಭಾ.ಭಾ. ೯-೫, ಭಾ.ಭಾ. ೫).

**ಯೋಗೀ :-** ಯೋಗವುಳ್ಳವನು. ಯೋಗಶಬ್ದಕ್ಕೆ ಹೇಳಿರುವ ವಿಶೇಷಾರ್ಥಗಳನ್ನೆಲ್ಲ ಈ ಶಬ್ದಕ್ಕೆ ಹೊಂದಿಸಿಕೊಂಡು ಸಂದರ್ಭಾನುಸಾರವಾಗಿ ಅರ್ಥಮಾಡಿಕೊಳ್ಳಬೇಕು.

## ರ

**ರಜ್ಜುಸರ್ಪಃ :-** ಹಗ್ಗದಲ್ಲಿ ತೋರುವ ಹಾವು. ಹಾವು ಭ್ರಾಂತಿಯಿಂದ ತೋರುವದೇ ಹೊರತು ನಿಜವಾಗಿ ಹಗ್ಗದಲ್ಲಿ ಉತ್ಪನ್ನವಾಗಿರುವದಿಲ್ಲವೆಂಬುದು ಆಚಾರ್ಯರ ಮತವು. ಪ್ರಾತಿಭಾಸಿಕಸರ್ಪವು ತತ್ಕಾಲದಲ್ಲಿ ಹುಟ್ಟಿರುವದೆಂಬ ಮತವು ಭಾಷ್ಯದಲ್ಲಿಲ್ಲ. (ಸೂ. ಭಾ. ೧-೪-೬, ಭಾ. ಭಾ. ೩೫೧, ಮಾಂ. ಕಾ. ಭಾ. ೧-೧೭, ಭಾ. ಭಾ. ೫೫, ೨-೩೭, ಭಾ. ಭಾ. ೧೧೩).

**ರಜ್ಜುಸರ್ಪವಿವೇಕಃ :-** ಹಾವು ನಿಜವಾಗಿ ಇಲ್ಲದೆ ತೋರುವ ಹುಸಿಯೆಂದೂ ಹಗ್ಗವೇ ನಿಜವಾದದ್ದೆಂದೂ ವಿಂಗಡಿಸಿ ತಿಳಿಯುವಿಕೆ. ಆತ್ಮಾನಾತ್ಮ ವಿವೇಕಕ್ಕೆ ದೃಷ್ಟಾಂತ. ಮಾಂ. ಭಾ. ೭೧ ಭಾ. ಭಾ. ೩೯.

**ರಾಗಾದಿದೋಷಾಃ, ರಾಗಾದಿಕ್ಲೇಶಾಃ :-** ರಾಗ, ಭಯ, ಕ್ರೋಧ- ಮುಂತಾದ ದೋಷಗಳು; ರಾಗಾದಿದೋಷಗಳಿಲ್ಲದವರಿಗೇ ಆತ್ಮಾವಗತಿಯಾಗುವದು. ಸೂ.ಭಾ. ೧-೩-೨, ಮಾಂ. ಕಾ. ಭಾ. ೨-೩೫, ರಾಗಾದಿಗಳಿಂದಲೇ ಅವಿದ್ಯಾದೃಷ್ಟಿ, ಪ್ರವೃತ್ತಿ. ಗೀ. ಭಾ. ೧೨-೨, ಭಾ. ಭಾ. ೧೮೪. ೧೩-೨, ಭಾ. ಭಾ. ೨೨೬.

## ಲ

**ಲಯಃ :-** ಕಾರಣದಲ್ಲಿ ಅಡಗುವದು, ಸುಷುಪ್ತಿ; ಪ್ರಲಯ. ಸೂ.ಭಾ. ೧-೧-೯; ಮಾಂ. ಕಾ. ೩-೪೨, ಭಾ.ಭಾ. ೨೦೩.

**ಲಿಙ್ಗಮ್ :-** (೧) ಗುರುತು, ಧೂಮಾದಿಹೇತು, ಸೂ. ಭಾ. ೨-೧-೧೧; (೨) ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳದೆ ಇದ್ದರೂ ಅದನ್ನು ತಿಳಿಸುವ ಜ್ಞಾಪಕಶಬ್ದ, ಸೂ.ಭಾ. ೧-೧-೨೨ (೩) ಸೂಕ್ಷ್ಮಶರೀರ, ಸೂ.ಭಾ. ೨-೪-೬.

**ಲಿಙ್ಗೋಪಾಧಿಃ :-** ಲಿಂಗಶರೀರ ಅಥವಾ ಸೂಕ್ಷ್ಮಶರೀರವೇಂಬ ಉಪಾಧಿಯುಳ್ಳ ಜೀವ, ಮುಂ. ಭಾ. ೩-೧-೧. ಅವಿದ್ಯಾಕಾಮಕರ್ಮಗಳಿಗೆ ಇವನೇ ಆಶ್ರಯ, ಭಾ. ಭಾ. ೯೧.

**ಲೋಕಃ :-** (೧) ಭೋಗಸ್ಥಾನ, ಭೂಲೋಕಾದಿಯಾಗಿ ಸತ್ಯಲೋಕದವರೆಗಿನ ಲೋಕಗಳು, ಮುಂ. ಭಾ. ೧-೨-೩ (ಭಾ.ಭಾ. ೩೨); (೨) ಇಂದ್ರಿಯಸ್ಥಾನಗಳು, ಮುಂ. ಭಾ. ೨-೧-೮; (೩) ಕರ್ಮಫಲ, ಮುಂ. ಭಾ. ೧-೨-೧; (೪) ನಾನು ನನ್ನದೆಂಬ ಮಿಥ್ಯಾಭಿಮಾನ, ಶರೀರ ಕೇ.ಭಾ. ೧-೨ (ಭಾ. ಭಾ. ೨೩); (೫) ಲೋಕದಲ್ಲಿ ಕಂಡಿರುವ ದೃಷ್ಟಾಂತ, ಸೂ. ಭಾ. ೨-೧-೩೩; (೬) ಲೋಕಪ್ರಸಿದ್ಧಿ, ಸೂ. ಭಾ. ೧-೩-೩೨; (೭) ಬೇರೆಬೇರೆ ಸಾಧಕರಿಗೆ ಕಾಣಬರುವ, ಅಥವಾ ಪ್ರಾಪ್ಯವಾಗಿರುವ ಬ್ರಹ್ಮ, ಮುಂ. ೩-೩-೬.

**ಲೋಕದೃಷ್ಟಿಃ, ಲೌಕಿಕದೃಷ್ಟಿಃ :-** ಪರಮಾರ್ಥವಾದ ಶಾಸ್ತ್ರದೃಷ್ಟಿಯಲ್ಲ, ಸ್ವಾಭಾವಿಕವಾಗಿ ಜನರಿಗೆ ಇರುವ ದೃಷ್ಟಿ, ಸೂ. ಭಾ. ೨-೨-೩, ಗೀ. ಭಾ. ೧೮-೧೭ (ಭಾ.ಭಾ. ೪೯೪).

**ಲೌಕಿಕಜ್ಞಾನಮ್ :-** ವೃತ್ತಿಜ್ಞಾನ, ಬ್ರಹ್ಮಸ್ವರೂಪವಾದ ಜ್ಞಾನವಲ್ಲ, ತೈ. ಭಾ. ೨-೧, (ಭಾ. ಭಾ. ೧೦೨).

**ಲೌಕಾಯತಿಕಾ :-** ಲೋಕದಲ್ಲಿ ಎಲ್ಲೆಲ್ಲಿಯೂ ಕಾಣಬರುವ ಚಾರ್ವಾಕರು, ಸೂ.ಭಾ. ೧-೧-೧.

**ಲೌಕಿಕ ಪ್ರಜ್ಞಾ :-** ಸಾಮಾನ್ಯದೃಷ್ಟಿಯ ಜನರಿಗಿರುವ ತಿಳಿವಳಿಕೆ, ತೈ.ಭಾ. ೧-೪.

**ಲೌಕಿಕಪ್ರಮಾಣಾನಿ :-** ಪ್ರತ್ಯಕ್ಷಾದಿಗಳು, ಶಾಸ್ತ್ರವಲ್ಲ. ಸೂ. ಭಾ. ೨-೧-೧೪.

**ಲೌಕಿಕಾನನ್ದಃ** :- ವಿಷಯಗಳಿಂದ ಜನರಿಗೆ ಆಗುವ ಸುಖ, ಬ್ರಹ್ಮಸ್ವರೂಪವಾದ ಆನಂದವಲ್ಲ, ತೈ.ಭಾ. ೨-೮ (ಭಾ. ಭಾ. ೧೯೬).

## ವ

**ವನ್ಧ್ಯಾಪುತ್ರಃ** :- ಬಂಜೆಯ ಮಗ, ನಿಜವಾಗಿಲ್ಲದೆ ಇದ್ದರೂ ಶಬ್ದಮಾತ್ರದಿಂದ ತಿಳಿಸಿದ್ದರಿಂದ ಆಗುವ ವಿಕಲ್ಪಕ್ಕೆ ದೃಷ್ಟಾಂತ, ಗೀ. ಭಾ. ೧೮-೪೮, (ಭಾ.ಭಾ. ೫೪೫).

**ವಸ್ತುತನ್ತ್ರಃ** :- ಕರ್ತೃವಿಗಾಗಲಿ ವಿಧಿಗಾಗಲಿ ವಶವಾಗಿರದೆ ವಸ್ತು ಸ್ವಭಾವಕ್ಕನುಗುಣವಾಗಿ ಆಗುವ ಜ್ಞಾನ. ಸ್ತ್ರೀಯನ್ನು ಅಗ್ನಿಯೆಂದು ತಿಳಿಯಬೇಕೆಂಬ ವಿಧಿಗೆ ಅನುಗುಣವಾಗಿ ತಿಳಿಯುವದು ವಸ್ತುತಂತ್ರಜ್ಞಾನವಲ್ಲ, ಧ್ಯಾನ; ಬೆಂಕಿಯನ್ನು ಬೆಂಕಿಯೆಂದು ತಿಳಿಯುವದೂ ಬ್ರಹ್ಮವನ್ನು ಬ್ರಹ್ಮವೆಂದು ತಿಳಿಯುವದೂ ವಸ್ತುತಂತ್ರವಾದ ಜ್ಞಾನ ಸೂ. ಭಾ. ೧-೧-೪.

**ವಿಕಲ್ಪ** :- (೧) ವಿಷಯಗಳನ್ನು ಇಂಥಿಂಥದ್ದೆಂದು ಕಲ್ಪಿಸುವ ಮನಸ್ಸಿನ ಧರ್ಮ; (೨) ಹೀಗೂ ಆಗಬಹುದು, ಹಾಗೂ ಆಗಬಹುದೆಂದು ಕಲ್ಪಿಸುವದು. ಕ್ರಿಯೆಯಲ್ಲಿ ವಿಕಲ್ಪವಿರಬಹುದು, ವಸ್ತುವಿನಲ್ಲಿರಲಾರದು. ಸೂ.ಭಾ. ೧-೧-೪.

**ವೃತ್ತಿಃ** :- (೧) ಅಂತಃಕರಣದ ಅಥವಾ ಇಂದ್ರಿಯಗಳ ವ್ಯಾಪಾರ; ಸೂ.ಭಾ. ೧-೧-೨೩, ೨-೩-೩೨; (೨) ಶಬ್ದವ್ಯಾಪಾರ, ೧-೧-೭.

**ವಿಷಯಃ** :- (೧) ಶಬ್ದಸ್ಪರ್ಶಾದಿಗಳು; (೨) ಅರಿಯಲ್ಪಡುವ ಅನಾತ್ಮ, (ವಿಷಯಿಯಾದ ಆತ್ಮನಲ್ಲ).

**ವಿಕಾರಃ** :- (೧) ಮಾರ್ಪಾಡು, ಸೂ. ಭಾ. ೧-೧-೨; (೨) ಕಾರ್ಯ, (ಕಾರಣವಲ್ಲ), ಸೂ. ಭಾ. ೧-೧-೧೩.

**ವಿಜ್ಞಾನಾತ್ಮ** :- ಬುದ್ಧಿ ಎಂಬ ಉಪಾಧಿಯುಳ್ಳ ಜೀವ, ಸೂ.ಭಾ. ೧-೨-೧೭.

**ವೇದಾನ್ತಃ** :- (೧) ಉಪನಿಷತ್ತು , ೧-೪-೧೪; (೨) ಉಪನಿಷತ್ತುಗಳಲ್ಲಿರುವ ವೇದಾಂತಶಾಸ್ತ್ರ, ಗೀ. ಭಾ. ೧೮-೧೩.

**ವ್ಯಾಕೃತ** :- ನಾಮರೂಪಗಳೆಂದು ವಿಂಗಡವಾಗಿರುವ, ಸೂ. ಭಾ. ೧-೧-೨.

**ವ್ಯಾವಹಾರಿಕ** :- ಶಬ್ದಪ್ರತ್ಯಯರೂಪವಾದ ವ್ಯವಹಾರಕ್ಕೆ ಸೇರಿದ್ದು, ಪರಮಾರ್ಥವಲ್ಲ, ಸೂ.ಭಾ. ೨-೧-೧೪.

## ಶ

**ಶಕ್ತಿಃ :-** ಜಗತ್ತು ಪ್ರಲಯವಾಗಲು ಉಳಿಯುವ ನಾಮರೂಪಬೀಜ ಶಕ್ತಿ, ಅವ್ಯಾಕೃತ (ಸೂ. ಭಾ. ೧-೩-೩೦, ಭಾ.ಭಾ. ೨೯೫).

**ಶಬ್ದಃ :-** (೧) ಮಾತು, (ವಸ್ತುವಲ್ಲ); (೨) ಶ್ರೋತ್ರೇಂದ್ರಿಯಕ್ಕೆ ವಿಷಯವಾದ ಸದ್ದು; (೩) ಶಬ್ದಪ್ರಮಾಣ.

**ಶಬ್ದಪ್ರಮಾಣಕ :-** (೧) ಶ್ರುತಿಯನ್ನೇ ಪ್ರಮಾಣವೆಂದು ಒಪ್ಪಿರುವವ ಸೂ. ಭಾ. ೧-೩-೩೩ (೨) ಶಬ್ದಪ್ರಮಾಣದಿಂದ ಮಾತ್ರವೇ ತಿಳಿಯಬರುವ ಬ್ರಹ್ಮ ಮುಂತಾದದ್ದು. ಸೂ. ಭಾ. ೧-೧-೭.

**ಶಮ :-** (೧) ಅಂತಃಕರಣವನ್ನು ಬಿಗಿಹಿಡಿಯುವದು; (೨) ಸರ್ವಕರ್ಮ ಸಂನ್ಯಾಸ, ಸೂ. ಭಾ. ೬-೩, ಭಾ ಭಾ ೩೭೮.

**ಶಶವಿಷಾಣಮ್ :-** ಅತ್ಯಂತವಾಗಿ ಇಲ್ಲದಿರುವ ವಸ್ತು, ವಿಕಲ್ಪಮಾತ್ರ (ಅಭಾವಕ್ಕೆ ದೃಷ್ಟಾಂತ) ಗೀ. ಭಾ. ೧೮-೪೮, ಭಾ. ಭಾ. ೫೪೪., ಮೊಲದಕೊಂಬು, ಎಂದಿಗೂ ಇಲ್ಲದ್ದು; ಅಭಾವವು ಭಾವದಂತಲ್ಲವೆಂಬುದನ್ನು ಸ್ಪಷ್ಟಪಡಿಸುವದಕ್ಕೋಸ್ಕರ ಅದನ್ನು ಮೊಲದ ಕೊಂಬು, ಬಂಜೆಯ ಮಗ ಮುಂತಾದ ವಿಕಲ್ಪಗಳಿಗೆ ಹೋಲಿಸುವದು ಭಾಷ್ಯದಲ್ಲಿ ರೂಢಿ, ಗೀ. ಭಾ. ೧೮-೪೮, ಸೂ. ಭಾ. ೨-೧-೧೮.

**ಶರೀರದ್ವಯಮ್ :-** ಸ್ಥೂಲ ಮತ್ತು ಸೂಕ್ಷ್ಮ ಎಂಬ ಎರಡು ಶರೀರಗಳು, ಸೂ.ಭಾ. ೧-೪-೩.

**ಶರೀರಾತ್ ಸಮುತ್ಥಾನಮ್ :-** ಶರೀರವನ್ನು ಬಿಟ್ಟೇಳುವದು, ತಾನು ಅಶರೀರನೆಂಬುದನ್ನು ವಿವೇಕದಿಂದ ತಿಳಿದುಕೊಳ್ಳುವದು, ಸೂ. ಭಾ. ೧-೩-೧೯.

**ಶಾರೀರಃ :-** ಶರೀರವೆಂಬ ಉಪಾಧಿಯುಳ್ಳ ಜೀವ, ಸೂ. ಭಾ. ೧-೧-೧೨.

**ಶಾಲಗ್ರಾಮೇ ವಿಷ್ಣುಃ :-** ಶಾಲಗ್ರಾಮಶಿಲೆಯಲ್ಲಿ ವಿಷ್ಣುವಿರುವನೆಂಬ ಬುದ್ಧಿ; ಪ್ರತೀಕೋಪಾಸನೆಗೆ, ಅಥವಾ ವ್ಯಾಪಕನಿಗೂ ಒಂದು ಪ್ರದೇಶವಿರಬಹುದೆಂಬುದಕ್ಕೆ, ದೃಷ್ಟಾಂತ, ಸೂ. ಭಾ. ೧-೨-೧೫.

**ಶಾಸ್ತ್ರ :-** ಋಗ್ವೇದವೇ ಮುಂತಾದ ವೇದ; ಕರ್ಮಕ್ಕೂ ಬ್ರಹ್ಮಕ್ಕೂ ಪ್ರಮಾಣ, ಗೀ. ಭಾ. ೨-೨೧, ಭಾ. ಭಾ. ೪೦.

**ಶಾಸ್ತ್ರದೃಷ್ಟಿಃ :-** ಶಾಸ್ತ್ರದಲ್ಲಿ ಹೇಳಿರುವ ತತ್ತ್ವದೃಷ್ಟಿ, ಆ ದೃಷ್ಟಿಯನ್ನವಲಂಬಿಸಿರುವ ಪುರುಷ. ಸೂ. ಭಾ. ೨-೨-೩, ಗೀ. ಭಾ. ೩-೩೪.

**ಶಾಸ್ತ್ರಪ್ರಮಾಣಕ :-** (೧) ವೇದಮಾತ್ರದಿಂದಲೇ ತಿಳಿದುಬರುವ ಬ್ರಹ್ಮ; ಸೂ. ಭಾ. ೧-೧-೪; (೨) ವೇದವೇ ಪ್ರಮಾಣವೆಂದು ನಂಬುವವ.

**ಶಾಸ್ತ್ರಾಚಾರ್ಯೋಪದೇಶಃ :-** ಶಾಸ್ತ್ರ, ಗುರು- ಇವರ ಉಪದೇಶ. ತತ್ತ್ವವನ್ನು ತಿಳಿಯುವದಕ್ಕೆ ಶಾಸ್ತ್ರದಿಂದಾದ ಅರಿವು, ಗುರುಬೋಧೆಯಿಂದಾದ ಅರಿವು, ಮತ್ತು ತನ್ನ ಅರಿವು - ಇವು ಮೂರೂ ಒಂದಾಗಬೇಕು. ಗೀ. ಭಾ. ೧೩-೩೦, ೧೩-೩೪.

**ಶಿಷ್ಟಪ್ರವಾದಃ :-** ಶಾಸ್ತ್ರಾರ್ಥವನ್ನು ಬಲ್ಲವರ ಹೇಳಿಕೆ.

**ಶುಕ್ತಿಃ :-** ಕಪ್ಪೆಯ ಚಿಪ್ಪು ಬೆಳ್ಳಿಯಂತೆ ತೋರಿದರೂ ನಿಜವಾಗಿ ಕಪ್ಪೆಯ ಚಿಪ್ಪೇ ಆಗಿರುವಂತೆ, ಜಗತ್ತಾಗಿ ತೋರಿದರೂ ಆತ್ಮನು ನಿಜವಾಗಿ ಆತ್ಮನೇ ಎಂಬುದಕ್ಕೆ ಈ ದೃಷ್ಟಾಂತವನ್ನು ಭಾಷ್ಯದಲ್ಲಿ ಕೊಟ್ಟಿದೆ.

**ಶುದ್ಧಬ್ರಹ್ಮ :-** ಅಧ್ಯಾರೋಪಿತವಾದ ಗುಣಗಳ ಸಂಬಂಧವಿಲ್ಲದ ಬರಿಯ ಬ್ರಹ್ಮ, ಸೂ. ಭಾ. ೧-೨-೨.

**ಶುಷ್ಕತರ್ಕ :-** ಪ್ರಮಾಣದ ಬಲವಿಲ್ಲದ ಒಣಯುಕ್ತಿ , ಸೂ. ಭಾ. ೨-೧-೬.

**ಶ್ರವಣಮ್ :-** ವೇದಾಂತವಾಕ್ಯವನ್ನು ಕೇಳಿ ಅರ್ಥವನ್ನು ಅರಿತು ಕೊಳ್ಳುವದು ಉತ್ತಮಾಧಿಕಾರಿಗಳಿಗೆ ತತ್ತ್ವಮಸ್ಯಾದಿವಾಕ್ಯಗಳ ಶ್ರವಣಮಾತ್ರ ದಿಂದಲೇ ಜ್ಞಾನವಾಗುತ್ತದೆ, ಸೂ. ಭಾ. ೪-೧-೪.

**ಶ್ರವಣಮನನನಿದಿಧ್ಯಾಸನಾನಿ :-** ಆತ್ಮವಿಷಯದ ವೇದಾಂತವಾಕ್ಯಗಳ ಶ್ರವಣ. ಅವುಗಳಿಗೆ ಪೂರ್ವಾಪರವಿರೋಧವಿಲ್ಲವೆಂಬುದನ್ನು ತರ್ಕಮಾಡುವದು, ಅನುಭವಕ್ಕೆ ತಂದುಕೊಳ್ಳುವದು; ಇವು ಮೂರೂ ಬ್ರಹ್ಮಜ್ಞಾನಕ್ಕೆ ನೇರಾದ ಸಾಧನಗಳು. ಬೃ.ಭಾ. ೧-೪-೨.

**ಶ್ರುತಹಾನ್ಯಶ್ರುತಕಲ್ಪನೇ :-** ವಾಕ್ಯದಲ್ಲಿ ಹೇಳಿರುವದನ್ನು ಬಿಟ್ಟು ಹೇಳದೆ ಇರುವದನ್ನು ಕಲ್ಪಿಸುವ ದೋಷ.

## ಸ

**ಸಂಸಾರಃ :-** ಜನನಮರಣಗಳು, ಸುಖದುಃಖಭೋಗ.

**ಸಂಸಾರಬೀಜಾನಿ :-** ಸಂಸಾರಕ್ಕೆ ಕಾರಣವಾಗಿರುವ, ಅವಿದ್ಯೆ , ಕಾಮ, ಕರ್ಮ, ಸೂ. ಭಾ. ೧-೧-೧, ಕ. ೧-೧-೧೯.

**ಸಂಸಾರಿವ್ಯತಿರಿಕ್ತೇಶ್ವರಃ :-** ಸಂಸಾರಿಯಾದ ಜೀವನ ಆತ್ಮನಲ್ಲದ ತಟಸ್ಥನಾದ ಈಶ್ವರನು. ಸೂ. ಭಾ. ೧-೧-೨.

**ಸಂಸ್ಕಾರಃ :-** (೧) ಗುಣವನ್ನುಂಟುಮಾಡುವದು, ದೋಷವನ್ನು ತೆಗೆಯುವದು. ಸೂ. ಭಾ. ೧-೧-೪, (೨) ಅಂತಃಕರಣದಲ್ಲಿ ಅನುಭವದಿಂದಾಗುವ ವಾಸನೆ, ೧-೩-೨೮ (ಭಾ. ಭಾ. ೨೮೮).

**ಸಂಸ್ಕೃತಬುದ್ಧಿಃ :-** ಶಾಸ್ತ್ರಾಚಾರ್ಯರ ಉಪದೇಶದ ಸಂಸ್ಕಾರವುಳ್ಳಬುದ್ಧಿ, ಐಕಾಗ್ರ್ಯವನ್ನು ಹೊಂದಿದ ಬುದ್ಧಿ, ಕ. ೧-೩-೧೨.

**ಸಂಹತ :-** ಅನೇಕಪದಾರ್ಥಗಳು ಒಟ್ಟುಗೂಡಿ, ಸ್ವತಂತ್ರನಾದ ಒಬ್ಬನಿಗೆ ಪ್ರಯೋಜನವನ್ನುಂಟುಮಾಡುವದು. ಉದಾಹರಣೆ ದೇಹೇಂದ್ರಿಯಗಳು ಸಂಹತವಾಗಿ ಸಂಹತನಾದ ಆತ್ಮಾರ್ಥವಾಗಿ ಕೆಲಸಮಾಡುತ್ತಿರುವವು. ಪ್ರ.ಭಾ. ೩-೧; ತೈ.ಭಾ. ೩-೭ (ಭಾ. ಭಾ. ೧೮೬)

**ಸಗುಣಬ್ರಹ್ಮ :-** ಕಾರ್ಯವಾದ ಜಗತ್ತಿನ ಕೆಲವು ಗುಣಗಳನ್ನು ಅಧ್ಯಾರೋಪ ಮಾಡಿಕೊಂಡು ಉಪಾಸನೆಮಾಡಬೇಕೆಂದು ಶ್ರುತಿಯಲ್ಲಿ ಹೇಳಿರುವ ಬ್ರಹ್ಮ, ಸೂ.ಭಾ. ೧-೨-೨, ೧-೨-೧೩ (ಭಾ. ಭಾ. ೧೭೮).

**ಸತ್ಕಾರ್ಯವಾದಃ :-** ಇರುವ ಕಾರಣವೇ ಕಾರ್ಯರೂಪವಾಗುವದೆಂಬ ವಾದ, (ಸಾಂಖ್ಯರು ಮತ್ತು ವೇದಾಂತಿಗಳ ವಾದ), ಸೂ.ಭಾ. ೨-೧-೭.

**ಸತ್ಯಾನೃತೇ :-** ಪರಮಾರ್ಥವಾದ ಆತ್ಮ ಮತ್ತು ಹುಸಿತೋರಿಕೆಯಾದ ಅನಾತ್ಮ, ಸೂ. ಭಾ. ಭಾ. ೧. ಸೂ. ಭಾ. ೨-೧-೧೪ (ಭಾ.ಭಾ. ೪೩೮).

**ಸತ್ತ್ವಾಧ್ಯಭಿಮಾನೀ :-** ಅಂತಃಕರಣವೇ ಮುಂತಾದದ್ದರ ಅಭಿಮಾನಿಯಾದ ಜೀವ, ೧-೩-೭, (ಭಾ.ಭಾ.೨೩೨).

**ಸತ್ಯಾನೃತೇ :-** ಯಾವಾಗಲೂ ಇರುವ (ಆತ್ಮ), ಹುಸಿತೋರಿಕೆಯ (ಅನಾತ್ಮ). ಅನಾತ್ಮವು ಆತ್ಮ ಎಂದಾಗಲಿ ಅವನಿಗಿಂತ ಬೇರೆಯೆಂದಾಗಲಿ ಹೇಳುವದಕ್ಕಿಲ್ಲದ ಅವಿದ್ಯಾಕೃತವಸ್ತುವಾದ್ದರಿಂದ ಅನೃತ, ಮಿಥ್ಯೆ, ಮೃಷಾ- ಎನ್ನಿಸಿಕೊಳ್ಳುವದು. ಅದರ ತತ್ತ್ವವು ಸತ್ಯವೇ. ಅಧ್ಯಾಸ ಭಾಷ್ಯ, ಸೂ. ಭಾ. ೨-೧-೧೪.

**ಸದ್ಯೋಮುಕ್ತಿಃ :-** ಜ್ಞಾನವಾದ ಕೂಡಲೆ ಆಗುವ ಜೀವನ್ಮುಕ್ತಿ, ಸತ್ತಬಳಿಕ ಆಗುವ ಮುಕ್ತಿಯಲ್ಲ. ಜ್ಞಾನವಾದ ಕೂಡಲೆ ಶರೀರವು ಬಿದ್ದು ಹೋಗುವದೆಂಬ ಕೆಲವರ ಪಕ್ಷದ ಸದ್ಯೋಮುಕ್ತಿಯನ್ನು ಆಚಾರ್ಯರು ಒಪ್ಪಿಲ್ಲ, ಸೂ. ಭಾ. ೧-೧-೪, ೧೨ ಗೀ. ಭಾ. ೮-೨೪.

**ಸಮನ್ವಯಃ :-** ವೇದಾಂತವಾಕ್ಯಗಳ ಮತ್ತು ಅವುಗಳಲ್ಲಿರುವ ಪದಗಳ ಅನ್ವಯ. ವಸ್ತುರೂಪವಾದ ಬ್ರಹ್ಮದಲ್ಲಿಯೇ ಸಮನ್ವಯವಾಗುತ್ತದೆ, ಕರ್ಮದಲ್ಲಲ್ಲ. ಸೂ. ೧-೧-೪.

**ಸರ್ವಜ್ಞಃ :-** ಎಲ್ಲವನ್ನೂ ಬಲ್ಲ, ಸರ್ವವನ್ನೂ ತಿಳಿಯುವ ಶಕ್ತಿಯುಳ್ಳ ಜ್ಞಾನದ ಈಶ್ವರನು, ೧-೧-೪ (ಭಾ.ಭಾ. ೬೯). ಸರ್ವಜ್ಞತ್ವವೆಂಬುದು ಸ್ವರೂಪಚೈತನ್ಯವೇ, ಸೂ.ಭಾ. ೧-೩-೪೨, (ಭಾ. ಭಾ. ೩೨೯).

**ಸರ್ವಾತ್ಮಭಾವಃ :-** ಎಲ್ಲವೂ ತಾನೇ ಆಗಿರುವದೆಂಬ ಬ್ರಹ್ಮಜ್ಞಾನ ಫಲ, ಸೂ.ಭಾ. ೧-೧-೪, (ಭಾ.ಭಾ. ೪೪).

**ಸರ್ವೋಪಾಧಿವಿವರ್ಜಿತಃ :-** ಯಾವ ಉಪಾಧಿಯೂ ಇಲ್ಲದ ನಿರ್ವಿಶೇಷ ಬ್ರಹ್ಮ, ಮುಖ್ಯಬ್ರಹ್ಮ, ಭಾ.ಬಾ. ೧-೧-೧೨ (ಸೂ.ಭಾ. ೯೦).

**ಸಶರೀರತ್ವಮ್ :-** ಶರೀರದಿಂದೊಡಗೂಡಿರುವದು ಮಿಥ್ಯಾಭಿಮಾನ ಕೃತ, ಅಶರೀರತ್ವವೇ ಸ್ವಾಭಾವಿಕ, ೧-೧೪ (ಭಾ.ಭಾ. ೫೮), ೧-೩-೧೯ (ಭಾ.ಭಾ. ೨೬೬).

**ಸುಷುಪ್ತಿಃ :-** ತನಿನಿದ್ರೆ ; ಈ ಅವಸ್ಥೆಯಲ್ಲಿ ಜೀವನು ಅಸಂಸಾರಿಯಾದ ಪರಮಾತ್ಮನಲ್ಲಿ ಬೆರೆತುಹೋಗುತ್ತಾನೆ, ಸೂ. ಭಾ. ೧-೧-೯, ೧-೩-೧೫, ೧-೩-೨೦, ೩-೨-೭, ಇಲ್ಲಿರುವ ಅಜ್ಞಾನಕ್ಕೆ ಐಕ್ಯವೇ ಕಾರಣ, ಸೂ.ಭಾ. ೩-೨-೭, ಬೃ. ಭಾ. ೪-೩-೨೧.

**ಸುಷುಪ್ತಿಸಮಾಧ್ಯಾದಿಃ :-** ತನಿನಿದ್ರೆ, ಸಮಾಧಿ ಮುಂತಾದ ಅವಸ್ಥೆಗಳಲ್ಲಿ ಬ್ರಹ್ಮದೊಡನೆ ಸ್ವಾಭಾವಿಕವಾದ ಅವಿಭಾಗವನ್ನೇ ಜೀವನು ಹೊಂದುತ್ತಾನೆ, ಸೂ. ೨-೧-೯.

*****

ಸಭ್ಯಗೃಹಸ್ಥನ ಲೌಕಿಕ, ಧಾರ್ಮಿಕ ಕರ್ತವ್ಯಗಳೇನು, ದೇವಸ್ಥಾನಗಳಲ್ಲಿ ಹೇಗೆ ನಡೆದುಕೊಳ್ಳಬೇಕು, ಮನಃಶಾಂತಿಗೆ ಸುಲಭೋಪಾಯ, ನಮ್ಮ ಜೀವನದ ಸ್ವರೂಪ ಮತ್ತು ಹೆಗ್ಗುರಿ ಇತ್ಯಾತಿ ಸಾಮಾನ್ಯ ಜನರ ಪ್ರಶ್ನೆಗಳಿಗೆಲ್ಲಾ ಸರಳವಾಗಿಯೂ, ಶಾಸ್ತ್ರಯುಕ್ತಿಗಳಿಗೇ ಒಪ್ಪಾಗಿಯೂ ಇರುವ ಉತ್ತರಗಳಿವೆ. ದಿನಕ್ಕೊಂದು ಲೇಖನದಂತೆ ಪಠಿಸಿದರೂ ವರ್ಷವಿಡೀ ಓದಬಹುದಾದ ಉತ್ತಮ ಗ್ರಂಥ. ವೇದಾಂತದ ಆರಂಭದಲ್ಲಿರುವ ಮನುಷ್ಯರಿಂದ ಹಿಡಿದು ಜಿಜ್ಞಾಸುಗಳಿಗೆ ಅನ್ವಯಿಸುವ ಅತ್ಯುಪಯುಕ್ತವಾದ ವಿಷಯಗಳಿವೆ.

(ಎರಡನೆಯ ಮುದ್ರಣ, 2012, ಪು. 356, ಬೆಲೆ. 70 ರೂ.)

## 5. ವೇದಾಂತ ಸಂದೇಶಗಳು : ಸಂಪುಟ 4 (ಅಧ್ಯಾತ್ಮದ ಔನ್ನತ್ಯದೆಡೆಗೆ)

ಅ. ಪ್ರ. ಪತ್ರಿಕೆಯ 19, 20, 22, 23 ಸಂಪುಟಗಳಲ್ಲಿ ''ಈ ತಿಂಗಳ ಸಂದೇಶಗಳು'' ಎಂಬ ಶೀರ್ಷಿಕೆಯಲಿ ಕ್ರಮ ಕ್ರಮವಾಗಿ ಪ್ರಕಟಿಸಿದ್ದ 48 ಲೇಖನಗಳ ಸಂಗ್ರಹ. (1) ಮಾಯೆಯಿಂದ ಮಾಯಾತೀತನೆಡೆಗೆ (2) ಸತ್ಯಜ್ಞಾನಾನಂದರ ದರ್ಶನದ ದಾರಿ (3) ಅಧ್ಯಾತ್ಮ ಪ್ರಗತಿಯ ಮಾರ್ಗಗಳು (4) ಸಾಧನಗಳಿಂದ ಪರಮಾತ್ಮನ ಆನಂದ ಎಂಬ ನಾಲ್ಕು ಅಧ್ಯಾಯಗಳಲ್ಲಿ ಅಳವಡಿಸಿದೆ.

(ಎರಡನೆಯ ಮುದ್ರಣ, 2012, ಪು. 334, ಬೆಲೆ. 60 ರೂ.)

## 6. ವೇದಾಂತ ಸಂದೇಶಗಳು : ಸಂಪುಟ 5 (ಶ್ರೀ ಶ್ರೀಗಳವರ ಹಿತವಚನಗಳು)

ಅ. ಪ್ರ. ಪತ್ರಿಕೆಯಲ್ಲಿ ಸಂಪುಟ 14ರಿಂದ ಸಂ. 44ರ ವರೆಗೆ (ಜನವರಿ 1943-ಫೆಬ್ರವರಿ 1975) ಶಂಕರನ ಪತ್ರಗಳು ಎಂಬ ಶೀರ್ಷಿಕೆಯಲ್ಲಿ ಕೆಲವೊಮ್ಮೆ ಒಂದು ಮತ್ತು 2-3 ಪುಟಗಳಂತೆ ಪ್ರಶ್ನೋತ್ತರ ರೂಪದಲ್ಲಿ ಶ್ರೀ ಶ್ರೀಗಳವರೇ ಬರೆದು ಪ್ರಕಟಿಸಿದ್ದ 337 ಲೇಖನಗಳ (583 ಪು.) ಸಂಗ್ರಹ. ಲೇಖನಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು : 1) ಕುಟುಂಬ ಭಾವನೆ, ಹರಿಜನ ಪ್ರೇಮ, ಧನದ ಉಪಯೋಗ ಇತ್ಯಾದಿ ಸಾಮಾನ್ಯ ವಿಷಯಗಳನ್ನೂ 2) ಪಾರಿವ್ರಾಜ್ಯ, ವೇದಾಂತದ ವಿಚಾರವನ್ನು ಚರ್ಚಿಸುವ ಕ್ರಮ, ಸಂನ್ಯಾಸಧರ್ಮ, ಆಧ್ಯಾತ್ಮಿಕ ಸಾಧನಗಳು, ನಿಜವಾದ ವಿದ್ಯೆ ಇತ್ಯಾದಿ ಶಾಸ್ತ್ರೀಯವಾದ ಲೇಖನಗಳನ್ನೂ ಒಳಗೊಂಡಿದೆ. ಪರಮಪುರುಷಾರ್ಥಕ್ಕೆ ಸಾಧನವಾದ ವಿಚಾರವನ್ನು ತಿಳಿಸುವ ಲೇಖನಗಳಾದ್ದರಿಂದ ಎಲ್ಲರಿಗೂ ಉಪಯುಕ್ತವಾದ ಗ್ರಂಥ. (ಎರಡನೆಯ ಮುದ್ರಣ, 2012, ಪು. 583. ಬೆಲೆ. 120 ರೂ.)

## 7. ಶಾಂಕರವೇದಾಂತ ನಿಘಂಟು :-

ಶ್ರೀ ಶ್ರೀಗಳವರು 1947 ಅಕ್ಟೋಬರ್ (ಸಂಪುಟ 17) ನಿಂದ 1950 ಆಗಸ್ಟ್ (ಸಂ.20)ರವರೆಗೆ ಬರೆದು ಪ್ರಕಟಿಸಿದ್ದ 41 ಲೇಖನಗಳ ಸಂಗ್ರಹ ಗ್ರಂಥರೂಪದಲ್ಲಿ ಈಗ ಮೊದಲನೆಯ ಬಾರಿಗೆ ಹೊರತರಲಾಗಿದೆ. ಪ್ರಸ್ಥಾನತ್ರಯ ಭಾಷ್ಯಗಳಲ್ಲಿರುವ ಸುಮಾರು 400 ಶಬ್ದಗಳಿಗೆ ಅರ್ಥ, ವಿವರಣೆ -ಮುಂದೆ ಬಂದಿರುವ ಸಂದರ್ಭಗಳನ್ನು ಸಹ ಸೂಚಿಸಿದೆ. ಅಕ್ಷರಾನುಕ್ರಮಣಿಕೆಯಲ್ಲಿ ಜೋಡಿಸಲಾಗಿದೆ. ಶಂಕರಾಚಾರ್ಯರ ವೇದಾಂತ ಪ್ರಕ್ರಿಯೆಯ ಅಸಾಧಾರಣ ರೂಪವನ್ನು ತಿಳಿದುಕೊಳ್ಳಬೇಕೆನ್ನುವವರಿಗೆ ಬಹಳ ಉಪಯುಕ್ತವಾದ ಗ್ರಂಥ. (ಮೊದಲನೆಯ ಮುದ್ರಣ 2014, ಪು. 58, ಬೆಲೆ. 20 ರೂ.)

## 8. ಹೊಸ ಜಿಜ್ಞಾಸುಗಳ ಪ್ರಶ್ನೆಗಳಿಗೆ ಉತ್ತರಗಳು ಮತ್ತು ಮನಸ್ಸಿಗೆ ಉಪದೇಶ:-

ಅ. ಪ್ರ. ಪತ್ರಿಕೆಯಲ್ಲಿ ಶ್ರೀಶ್ರೀಗಳವರು 1950 ಸೆಪ್ಟಂಬರ್ (ಸಂಪುಟ 20) ರಿಂದ 1956 ಮೇ (ಸಂ. 25)ರ ವರೆಗೆ 54 ಲೇಖನಗಳು ಮತ್ತು 1956 ಸೆಪ್ಟಂಬರ್ ನಿಂದ 1957 ಆಗಸ್ಟ್ (ಸಂ. 26) ವರೆಗೆ ಪ್ರಕಟಿಸಿದ್ದ 12 ಲೇಖನಗಳನ್ನು ಸೇರಿಸಿ ಪ್ರಶ್ನೋತ್ತರ ರೂಪದಲ್ಲಿ ಗ್ರಂಥ ರೂಪವಾಗಿ ಮೊದಲನೆಯ ಬಾರಿಗೆ ಹೊರತರಲಾಗಿದೆ. ಸಾಮಾನ್ಯ ಜನರಿಗೂ ಬಹಳ ಉಪಯುಕ್ತವಾಗಿ ವೇದಾಂತದಲ್ಲಿ ಅಭಿರುಚಿ ಯನ್ನು ಉಂಟುಮಾಡುವ ಗ್ರಂಥ. (ಮೊದಲನೆಯ ಮುದ್ರಣ 2014, ಪು. 84, ಬೆಲೆ. 30ರೂ.)

ಇತರ ಇನ್ನೂ ಕೆಲವು ಸಂಪುಟಗಳು ಹೊರಬರಲಿವೆ.

# ಸಂಸ್ಥಾಪಕರ ಸ್ಮರಣೆ



ವೇದಧರ್ಮದ ಪುನರುತ್ಥಾನ ಮತ್ತು ವೇದಾಂತಕ್ಕೊಂದು ನವಚೇತನ ತುಂಬಿದ ಮಹತ್ಕಾರ್ಯದಿಂದ ಶ್ರೀ ಶಂಕರ ಭಗವತ್ಪಾದರು ಸರ್ವದಾ ಸ್ಮರಣೀಯರು. ಬ್ರಹ್ಮೀಭೂತ ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು (ಪೂರ್ವಾಶ್ರಮದ ಶ್ರೀಯಲ್ಲಂಬಳಸೆ ಸುಬ್ರಹ್ಮಣ್ಯ ಶರ್ಮರು -ವೈ. ಸುಬ್ಬರಾಯರು, ಜನನ 5.1.1880) ಶ್ರೀಶಂಕರವೇದಾಂತ ಸರಣಿಯಿಂದ ಆಕರ್ಷಿತರಾಗಿ, ಆಳವಾದ ಅಧ್ಯಯನ, ಚಿಂತನ-ಮಂಥನ ಗಳಿಂದ, ತಮ್ಮ ವಿಶಿಷ್ಟ ಸಂಶೋಧನಾಪ್ರವೃತ್ತಿಯನ್ನು ಬಳಸಿ, ಶಂಕರರ ಅಮೋಘವಾದ ಪ್ರಸ್ಥಾನತ್ರಯಭಾಷ್ಯಗಳಿಗೆ ಹತ್ತಿದ್ದ ಕೊಳೆಯನ್ನು, ಮುತ್ತಿದ್ದಧೂಳನ್ನು ತೊಡೆದು ಶಾಂಕರ ವೇದಾಂತದನೈಜತಿರುಳನ್ನು ಕಂಡುಕೊಂಡರು. ಶಾಂಕರವೇದಾಂತಕ್ಕೆ 20ನೇ ಶತಮಾನದ ಅಧಿಕೃತ ವಕ್ತಾರರಾದರು, ಅಭಿನವಶಂಕರರಾದರು.

'ಬೆಳಿಗ್ಗೆ ಎದ್ದಾಗಿನಿಂದ ಮಲಗುವವರೆಗೂ ಹಾಗೂ ಹುಟ್ಟಿನಿಂದ ಬದುಕಿರುವವರೆಗೂ ವೇದಾಂತ ಚಿಂತನೆಯಿಂದಲೇ ಕಾಲವನ್ನು ಕಳೆಯಬೇಕು' ಎಂಬ ಅಭಿಯುಕ್ತರ ವಚನಕ್ಕೆ ಪ್ರತ್ಯಕ್ಷ ಉದಾಹರಣೆ ಯಾಗಿದ್ದ ಶ್ರೀ ಶ್ರೀಗಳವರು ತಮ್ಮ ಬಾಲ್ಯದಿಂದ 96ನೆಯ ವಯಸ್ಸಿನವರೆಗೂ ವೇದಾಂತಗ್ರಂಥ ಪಠನ, ಚಿಂತನ, ಪ್ರವಚನ, ಲೇಖನಗಳಲ್ಲಿ ತತ್ಪರರಾಗಿದ್ದ ಪುರುಷ ಸರಸ್ವತೀ ಎಂಬ ಅನ್ವರ್ಥ ನಾಮವನ್ನು ಹೊಂದಿದ್ದರು. ಅವರ ಕನ್ನಡ, ಇಂಗ್ಲಿಷ್, ಸಂಸ್ಕೃತ ಭಾಷೆಗಳ ಇನ್ನೂರಕ್ಕೂ ಮೀರಿದ ಕೃತಿಗಳು ವೇದಾಂತಪ್ರಪಂಚದಲ್ಲಿ ಅವರನ್ನು ಅಮರರನ್ನಾಗಿಸಿವೆ. ಸಂಸ್ಕೃತ ಬಾರದ ಅಧ್ಯಾತ್ಮ ವಿಚಾರದ ಜಿಜ್ಞಾಸುಗಳಿಗೆ ಒಂದು ವರಪ್ರದಾನವಾಗಿದೆ.

ಶಾಲಾ ಉಪಾಧ್ಯಾಯರಾಗಿ ಸೇವೆ ಸಲ್ಲಿಸುವಾಗಲೇ ಅಧ್ಯಾತ್ಮದ ಒಲವಿನಿಂದ ಸಂಸ್ಕೃತ ಕಲಿತು ಸಾಧಕರಾದರು. ಆ ಸಮಯದಲ್ಲಿ ಶ್ರೀ ಹೊಸಕೆರೆ ಚಿದಂಬರಯ್ಯನವರ, ಶ್ರೀ ಮಹಾಭಾಗವತರಸಂಪರ್ಕ, ಅಧ್ಯಾತ್ಮಬಾಂಧವ್ಯ, ಆತ್ಮೀಯತೆ, ಅನಂತರ ಶ್ರೀಗೋಂದಾವಲಿ ಮಹಾರಾಜರಲ್ಲಿ ಶ್ರೀರಾಮತಾರಕ ಮಂತ್ರೋಪದೇಶ, ಶೃಂಗೇರಿ ಜಗದ್ಗುರುಗಳಾದ ಶ್ರೀಸಚ್ಚಿದಾನಂದಶಿವಾಭಿನವನೃಸಿಂಹಭಾರತಿ ಮಹಾಸ್ವಾಮಿಗಳವರಿಂದ ಭಾಷ್ಯಶಾಂತಿಪಾಠಗಳು ಅವರ ಶ್ರದ್ಧಾಕಾರ್ಯತತ್ಪರತೆಗೆ ಮೆರಗನ್ನು ನೀಡಿದವು.

1937ರಲ್ಲಿ ಹೊಳೆನರಸೀಪುರದಲ್ಲಿ ನೆಲೆಸಿದ ಮೇಲೆ ತಮ್ಮನ್ನು ಪೂರ್ಣವಾಗಿ ಶಾಂಕರವೇದಾಂತಕ್ಕೆ ಅರ್ಪಿಸಿಕೊಂಡರು. 1948ರಲ್ಲಿ ಸಂನ್ಯಾಸಸ್ವೀಕಾರ ಮಾಡಿದರು. ಶುದ್ಧತತ್ತ್ವಾನ್ವೇಷಣೆ, ನಿಖರವಾದ ಬರವಣಿಗೆ, ಆಚಾರನಿಷ್ಠೆ ಮತ್ತು ಕಠೋರನಿಯಮಪಾಲನೆಗೆ ಶ್ರೀ ಶ್ರೀಗಳವರು ಹೆಸರಾದವರು. ಅವರು ಸ್ಥಾಪಿಸಿರುವ (1920) ಅಧ್ಯಾತ್ಮಪ್ರಕಾಶಕಾರ್ಯಾಲಯವು ಈಗಲೂ ನಿಜವಾದ ಅಧ್ಯಾತ್ಮವಿದ್ಯಾಪ್ರಸಾರ ಕೇಂದ್ರವಾಗಿದೆ.

ಪೂಜ್ಯರು 1975ನೇ ಆಗಸ್ಟ್ 5ರಂದು ಬ್ರಹ್ಮೀಭೂತರಾದರು. ಇವರ ಮಹಾಸಮಾಧಿ ಪೀಠವು ಹೊಳೆನರಸೀಪುರದಲ್ಲಿದೆ. ಇಂದಿಗೂ ಚೈತನ್ಯಸ್ವರೂಪಿಗಳಾಗಿ ಕಾರ್ಯಾಲಯದ ಮೂಲ ಶಕ್ತಿಯಾಗಿದ್ದಾರೆ.

ಈಚೆಗೆ 28.07.2008ರಂದು ಪ್ರತಿಷ್ಠೆಗೊಂಡ ಶ್ರೀ ಶ್ರೀಗಳವರ ಅಮೃತಶಿಲಾವಿಗ್ರಹವು ಹೊಳೆನರಸೀಪುರದ ಸಮಾಧಿಮಂದಿರದಲ್ಲಿ ರಾರಾಜಿಸುತ್ತಿದೆ.